KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ಫೆಬ್ರವರಿ ೮, ೨೦೦೭ (ಮಾಘ ೧೯, ಶಕವರ್ಷ ೧೯೨೮) | ಸಂಚಿಕೆ ೬ |
|---|---|---|

## ಭಾಗ - ೪ಎ

## ರಾಜ್ಯದ ವಿಧೇಯಕಗಳ ಮತ್ತು ಅವುಗಳ ಮೇಲೆ ಪರಿಶೀಲನಾ ಸಮಿತಿಯ ವರದಿಗಳು, ರಾಜ್ಯದ ಅಧಿನಿಯಮಗಳು ಮತ್ತು ಅಧ್ಯಾದೇಶಗಳು, ಕೇಂದ್ರದ ಮತ್ತು ರಾಜ್ಯದ ಶಾಸನಗಳ ಮೇರೆಗೆ ರಾಜ್ಯ ಸರ್ಕಾರವು ಹೊರಡಿಸಿದ ಸಾಮಾನ್ಯ ಶಾಸನಬದ್ಧ ನಿಯಮಗಳು ಮತ್ತು ರಾಜ್ಯಾಂಗದ ಮೇರೆಗೆ ರಾಜ್ಯಪಾಲರು ಮಾಡಿದ ನಿಯಮಗಳು, ಹಾಗೂ ಕರ್ನಾಟಕ ಉಚ್ಚ ನ್ಯಾಯಾಲಯವು ಮಾಡಿದ ನಿಯಮಗಳು.

ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಸಚಿವಾಲಯ

ಅಧಿಸೂಚನೆ

ಅಪಜೀ 99 ಎಫ್‌ಎಫ್ 2006 ಬೆಂಗಳೂರು, ದಿನಾಂಕ: 04-01-2007

1963ನೇ ಕರ್ನಾಟಕ ಅರಣ್ಯ ಅಧಿನಿಯಮ (1964 ನೇ ಕರ್ನಾಟಕ ಕಾಯ್ದೆ 5 ರ) ಕಲಂ 17ರಲ್ಲಿ ಪ್ರದತ್ತವಾಗಿರುವ ಅಧಿಕಾರದನ್ವಯ ಕರ್ನಾಟಕ ಸರ್ಕಾರದ ಉಧಾರಭಾವನೆಯ ಮೇರೆಗೆ ಸರ್ಕಾರದ ಅಧಿಸೂಚನೆಯ ಸಂಖ್ಯೆ ಎಹೆಚ್‌ಎಫ್‌ಎಫ್ 882 ಎಫ್‌ಎಫ್ 91 ದಿನಾಂಕ: 20-9-1994ರ ಪ್ರಕಾರ ಈ ಕೆಳಗೆ ಅನುಸೂಚಿಯಲ್ಲಿ ನಮೂದಿಸಿರುವ ಹಕ್ಕುಗಳ ಉಪಯೋಗಕ್ಕೆ ಒಳಪಟ್ಟು 04-01-2007ನೇ ದಿನಾಂಕದಿಂದ **"ಮೀಸಲು ಅರಣ್ಯ"** ವೆಂದು ಕರ್ನಾಟಕ ಸರ್ಕಾರವು ಕಾದಿರಿಸಿದೆ ಎಂದು ಈ ಮೂಲಕ ಘೋಷಿಸಲಾಗಿದೆ.

**ಅನುಸೂಚಿ**

| | | | |
|---|---|---|---|
| 1. | ಜಿಲ್ಲೆಯ ಹೆಸರು : | ದಾವಣಗೆರೆ | |
| 2. | ತಾಲ್ಲೂಕಿನ ಹೆಸರು: | ಹೊನ್ನಾಳಿ | |
| 3. | ಹೋಬಳಿ ಹೆಸರು : | ಕಸಬಾ | |
| 4. | ಗ್ರಾಮದ ಹೆಸರು : | ಮಾದನಬಾವಿ | |
| 5. | ಪ್ರದೇಶದ ಸರ್ವೆ ನಂ. | 6) | ವಿಸ್ತೀರ್ಣ (ಎ. ಗುಂ.) |
| | 121 | | 80.16 |
| | 122 | | 32.15 |
| | ಒಟ್ಟು | | 112.31 |
| 7. | ಬ್ಲಾಕಿನ ಹೆಸರು | : | ಮಾದನಬಾವಿ ಬ್ಲಾಕ್ |

**ಸರಹದ್ದುಗಳು**

ಉತ್ತರ:- ಮಾದನಬಾವಿ ಗ್ರಾಮದ ಸರ್ವೆ ನಂ.117, 118, 120, 142, 144, 145, 146

ಪೂರ್ವ:- ನ್ಯಾಮತಿ - ಹೊನ್ನಾಳಿ ರಸ್ತೆ.

ದಕ್ಷಿಣ:- ಮಾದನಬಾವಿ ಗ್ರಾಮದ ಸರ್ವೆ ನಂ.103 (ಕೆರೆ).

ಪಶ್ಚಿಮ:- ಮಾದನಬಾವಿ ಗ್ರಾಮದ ಸರ್ವೆ ನಂ.106, 107 ಮತ್ತು 124.

**ಗಡಿ ವಿವರಣೆ**

**ಉತ್ತರ:–** ಮಾದನಬಾವಿ ಗ್ರಾಮದ ಸರ್ವೆ ನಂ.121 ರ ವಾಯುವ್ಯ ಮೂಲೆ ಬಾಂದಿನಿಂದ ಸ್ಥಾನ ಸಂಖ್ಯೆ ಪ್ರಾರಂಭವಾಗಿ ಪೂರ್ವಕ್ಕೆ ವಿವಿಧ ದಿಕ್ಕಿನಲ್ಲಿ ಸರ್ವೆ ನಂ.117, 142, 120, 143 ಮತ್ತು 121 ರ ಸಾಮಾನ್ಯ ಸರಹದ್ದಿನ ಮೇಲೆ ಹಾಗೂ ಸರ್ವೆ ನಂ.121 ರಲ್ಲಿ ಮಧ್ಯದ ಸ್ಥಾನ ಸಂಖ್ಯೆ 2 ರಿಂದ 7ರ ಮೂಲಕ 37 ಸರಪಳಿ ದೂರ ಕ್ರಮಿಸಿ ನ್ಯಾಮತಿ ಹೊನ್ನಾಳಿ ರಸ್ತೆಯಲ್ಲಿರುವ ಸ್ಥಾನ ಸಂಖ್ಯೆ 8ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.

| ಸ್ಥಾನಸಂಖ್ಯೆಯಿಂದ | ಸ್ಥಾನಸಂಖ್ಯೆಗೆ | ಫೋರ್ ಬೇರಿಂಗ್(ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 1 | 2 | 80 | 11.00 |
| 2 | 3 | 116 | 4.00 |
| 3 | 4 | 116 | 6.00 |
| 4 | 5 | 116 | 3.00 |
| 5 | 6 | 125 | 5.00 |
| 6 | 7 | 116 | 3.00 |
| 7 | 8 | 112 | 5.00 |

**ಪೂರ್ವ:–** ರೇಖೆಯು ಸ್ಥಾನ ಸಂಖ್ಯೆ 8 ರಿಂದ ದಕ್ಷಿಣ ಕಡೆಗೆ ನ್ಯಾಮತಿ ಹೊನ್ನಾಳಿ ರಸ್ತೆಯ ಮೇಲೆ ಮಧ್ಯದ ಸ್ಥಾನ ಸಂಖ್ಯೆ 9 ರಿಂದ 15 ರ ಮೂಲಕ ಹಲವಾರು ದಿಕ್ಕುಗಳಲ್ಲಿ 41.00 ಸರಪಳಿ ದೂರ ಕ್ರಮಿಸಿ ಹಾಗೂ ಸರ್ವೆ ನಂ.103ರ ಆಗ್ನೇಯ ಮೂಲೆಯಲ್ಲಿ ರಸ್ತೆ ಬದಿಯಲ್ಲಿರುವ ಸ್ಥಾನ ಸಂಖ್ಯೆ 16 ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.

| ಸ್ಥಾನಸಂಖ್ಯೆಯಿಂದ | ಸ್ಥಾನಸಂಖ್ಯೆಗೆ | ಫೋರ್ ಬೇರಿಂಗ್(ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 8 | 9 | 178 | 4.00 |
| 9 | 10 | 178 | 3.00 |
| 10 | 11 | 193 | 7.00 |
| 11 | 12 | 190 | 9.00 |
| 12 | 13 | 219 | 3.50 |
| 13 | 14 | 219 | 4.00 |
| 14 | 15 | 219 | 7.00 |
| 15 | 16 | 209 | 3.50 |

**ದಕ್ಷಿಣ:–** ರೇಖೆಯು ಸ್ಥಾನ ಸಂಖ್ಯೆ 16 ರಿಂದ ವಾಯುವ್ಯ ದಿಕ್ಕಿಗೆ ಸರ್ವೆ ನಂ.103 ಮತ್ತು 122 ರ ಸಾಮಾನ್ಯ ಸರಹದ್ದಿನ ಮೇಲೆ ಮಧ್ಯದ ಸ್ಥಾನ ಸಂಖ್ಯೆ 17ರ ಮೂಲಕ 17ರ ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 18 ನ್ನು ಸೇರುತ್ತದೆ.

ಸ್ಥಾನ ಸಂಖ್ಯೆಯಿಂದ ಸ್ಥಾನ ಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.

| ಸ್ಥಾನಸಂಖ್ಯೆಯಿಂದ | ಸ್ಥಾನಸಂಖ್ಯೆಗೆ | ಫೋರ್ ಬೇರಿಂಗ್(ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 16 | 17 | 292 | 9.50 |
| 17 | 18 | 295 | 7.50 |

**ಪಶ್ಚಿಮ:–** ರೇಖೆಯು ಸ್ಥಾನ ಸಂಖ್ಯೆ 18 ರಿಂದ ಸರ್ವೆ ನಂ. 122 ರಲ್ಲಿ ಹಾಗೂ ಸರ್ವೆ ನಂ.134, 107 ಮತ್ತು 121ರ ರ ಸಾಮಾನ್ಯ ಸರಹದ್ದಿನ ಮೇಲೆ ಉತ್ತರದ ಕಡೆಗೆ ಹಲವಾರು ದಿಕ್ಕುಗಳಲ್ಲಿ ಸ್ಥಾನ ಸಂಖ್ಯೆ 19 ರಿಂದ 21ರ ಮೂಲಕ 41.25 ಸರಪಳಿ ದೂರ ಕ್ರಮಿಸಿ ಸ್ಥಾನ ಸಂಖ್ಯೆ 1 ನ್ನು ಸೇರುತ್ತದೆ.

ಸ್ಥಾನಸಂಖ್ಯೆಯಿಂದ ಸ್ಥಾನಸಂಖ್ಯೆಗೆ ಇರುವ ದೂರ ಮತ್ತು ಬೇರಿಂಗ್ ಕೆಳಗಿನಂತಿದೆ.

| ಸ್ಥಾನಸಂಖ್ಯೆಯಿಂದ | ಸ್ಥಾನಸಂಖ್ಯೆಗೆ | ಬೇರಿಂಗ್ (ಡಿಗ್ರಿಗಳಲ್ಲಿ) | ದೂರ (ಸರಪಳಿಗಳಲ್ಲಿ) |
|---|---|---|---|
| 18 | 19 | 335 | 1.50 |
| 19 | 20 | 21 | 3.25 |
| 20 | 21 | 13 | 4.00 |
| 21 | 1 | 346 | 32.50 |

**ದಾರಿಯ ಹಕ್ಕುಗಳು**

1. ಬಂಡಿದಾರಿಯು ನ್ಯಾಮತಿ–ಹೊನ್ನಾಳಿ ರಸ್ತೆಯಿಂದ ಪ್ರಾರಂಭಿಸಿ ಸರ್ವೆ ನಂ. 122ರಲ್ಲಿ ಪಶ್ಚಿಮದ ಕಡೆಗೆ ಕೆಂಚಿಕೊಪ್ಪಕ್ಕೆ ಹೋಗುತ್ತದೆ.
2. ಬಂಡಿದಾರಿಯು ನ್ಯಾಮತಿ–ಹೊನ್ನಾಳಿ ರಸ್ತೆಯಿಂದ ಸರ್ವೆ ನಂ. 121, 122ರ ಕೂಡುಬಾಂದ್‌ನಲ್ಲಿಂದ ಪ್ರಾರಂಭಿಸಿ ಸರ್ವೆ ನಂ. 122ರಲ್ಲಿ ನೈರುತ್ಯದ ಕಡೆಗೆ ಕೆಂಚಿಕೊಪ್ಪ ರಸ್ತೆಯನ್ನು ಮುಟ್ಟುತ್ತದೆ.
3. ಬಂಡಿದಾರಿಯು ನ್ಯಾಮತಿ–ಹೊನ್ನಾಳಿ ರಸ್ತೆಯಿಂದ ಸರ್ವೆ ನಂ. 121 ಪೂರ್ವ ಬದಿಯಲ್ಲಿಂದ ಪ್ರಾರಂಭಿಸಿ ಸರ್ವೆ ನಂ. 121ರಲ್ಲಿ ಪಶ್ಚಿಮದ ಕಡೆಗೆ ಹಿಡುವಳಿ ಜಮೀನಿಗೆ ಹೋಗುತ್ತದೆ.

**ಇತರೆ ಸವಲತ್ತುಗಳು**

1. ಎಳೆಯ ನೆಡುತೋಪುಗಳ ವಿನಃ ಉಳಿದೆಡೆ ಗ್ರಾಮಸ್ಥರು ತಮ್ಮ ಜಾನುವಾರುಗಳಿಗೆ ನಿರ್ಭಂಧವಿಲ್ಲದೆ ಹುಲ್ಲು ಮೇಯಿಸಬಹುದಾಗಿದೆ.
2. ಎಳೆಯ ನೆಡುತೋಪುಗಳ ವಿನಃ ಉಳಿದೆಡೆ ಗ್ರಾಮಸ್ಥರು ತಮ್ಮ ವಾಸ್ತವಿಕ ಉಪಯೋಗಕ್ಕಾಗಿ ಹಸಿರು ಎಲೆ ಗೊಬ್ಬರ ಸೊಪ್ಪು ಮತ್ತು ಒಣ ಸೌದೆಯನ್ನು ಉಚಿತವಾಗಿ ಸಂಗ್ರಹಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಕೆ.ವಿ. ಜಯಲಕ್ಷ್ಮಿ
ಸರ್ಕಾರದ ಅಧೀನ ಕಾರ್ಯದರ್ಶಿ
ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಇಲಾಖೆ,

ಪಿ.ಆರ್. 22

**COMMERCE AND INDUSTRIES SECRETARIAT**
**NOTIFICATION**
**NO. CI 102 SGF 04 Bangalore, Dated 8th January 2007.**

Whereas it is necessary to make on order with a view to enabling Shri, Dhanalaxmi Sahakari Sakkare Karkhane (N), Khanpeth Ramadurga – 591123. Ramdurga Taluk, Belgaum District, to purchase the quanity of Sugar Cane required having regard to the crushing capacity of the factory, the availability of Sugarcane in the area where sugarcane is grown and the need for production of Sugar.

Now, therefore, in exercise of the powers conferred by clause 6,7,8 and 9 of the Sugarcane (Control) order 1966 read with CSR 1127, dated 16th July 1966 of the Government of India in the Ministry of Food, Agriculture, Community Development and Co-Operation (Department of Food) the Government of Karnataka hereby makes the following orders namely:-

1. TITLE, COMMENCEMENT AND DURATION OF OPERATION:
   I) This Order may be called the Karnataka Sugarcane (Regulation of Distribution) Shri. Dhanalaxmi Sahakari Sakkare Karkhane (N), Khanpeth-Ramadurga – 591123. Ramdurga Taluk, Belgaum District order 2007.

   ii) It shall come into force at once and shall remain in force till withdrawn or repealed subject to amendments as the State Government may make from time to time.
2. DEFINITIONS :- iN this order:-

   a. Factory means the premises of the factory at Ramdurga, Owned by Shri. Dhanalaxmi Sahakari Sakkare Karkhane (N), Khanpeth-Ramadurga- 591123. Ramdurga Taluk, Belgaum District, including the precincts of such factory.
   b. `Form' means a form appended to this order.
   c. Words and expressions used in this order but not defined shall have the meaning assigned to them in clause 2 of the Sugarcane (Control) order 1996.

3. Determination of the quantity of Sugarcane required by the factory and reservation of the area for supply of sugarcane.

i) The crushing capacity of Shri, Dhanalaxmi Sahakari Sakkare Karkhane (N), being 2500 TCD. The quantity of Sugarcane required by the factory during a year is about 4.5 Lakh M. Ts to 5 Lakh M.Ts.

ii) The factory shall secure the sugarcane determined under sub clause (2) from the areas specified in schedule-I to this order which shall be the area reserved temporarily in the interest of farmers for supplying sugarcane to the factory concerned, till the new factories, likely to come up in that area are established.

4. FIXIATION OF QUANTITY OF SUGARCANE TO BE SUPPLIED BY THE GROWER:-

   Every grower of sugarcane in the area reserved temporarily as specified in Schedule_I shall supply to the factory ninety five percent of the sugarcane grown by each such grower Co-operative Society operating in the reserved area, through such society.
5. AGREEMENT TO SUPPLY OR PURCHASE THE DETERMINED QUANTITY OF SUGARCANE.

   Every grower of sugarcane or a sugarcane power Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4
6. PROHIBITION OF EXPORT OF SUGARCANE FROM AREA RESERVED TEMPORARILY.

   No. Sugarcane shall be exported from the are a reserved temporarily except under and in accordance with the conditions of a permit issued by the Deputy Commissioner in Form-I of Schedule-II
7. ISSUE OF PERMITS:

   i. Application for the grant of a permit under clause-6 shall be made in form 2 of Schedule-II and shall be accompanied by a fee of Rs. 5/- and an amount of Rs. 100/- as security Deposit.
   ii. If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forfeited, pass order forfeiting the whole or part of the amount deposited as security.

By Order and in the name of the Governor of Karnataka,
**P. ANANDA KUMAR**
Desk officer (Sugar)
Commerce and Industries Department.

**SCHEDULE -1**

All the villages of Ramdurga Taluk, Belgaum District were earlier allotted to M/s. Godavari Sugars Ltd., Sameerwadi, Mudhol Taluk, Bagalkot District in Government Notification No. CI 49 SGF 78 (P) dt: 30.11.1978 are now withdrawn and allotted temporarily to Sri. Dhanalaxmi Sahakari Sakkare Kharkhane (N), Khanpeth-Ramadurga Taluk, Belgaum District for supply of Sugar Cane.

By Order and in the name of the Governor of Karnataka,

**P. ANANDA KUMAR**

Desk officer (Sugar)

Commerce and Industries Department.

**SCHEDULE –II FORM –II**
**(SEE CLAUSE 7)**

The Karnataka Sugarcane (Regulation of Distribution), Shri Dhanalaxmi Sahakari Sakkare Karkhane (N), Khanpeth-Ramadurga-591123, Ramdurga Taluk, Belgaum District Order 2007.

Application for the grant of permit for exporting sugarcane form a reserved area.

1. Full Name of the Applicant :
2. Father's Name :
3. Residential Address in full :
4. Quantity of Sugarcane for which permit is requested for export :
5. Area and the village form which Sugarcane is intended to be exported :
6. The purpose for which the export Is intended :

i) For Sale :
ii) For Crushing Sugarcane Juice or or manufacture of Gur/Sakkare Gul/Jaggery/Rabi/or Khandasari For sale or self consumption :

I declare that, I am fully aware of the provision 5 of the Karnataka Sugarcane (Regulation of Distribution), Shri, Dhanalaxmi Sahakari Sakkare Karkhane (N), Khanpeth-Ramadurga – 591123. Ramdurga Taluk, Belgaum District order 2007 and the particulars furnished in the application are ture to the best of my knowledge and belief and the permit to be issued will be properly used for the purpose for which it is issued. I have actually read-got read and understood the conditions of the permit given in Form No.1 of the Schedule appended to the Karnataka Sugarcane (Regulation of Distribution), Shri, Dhanalaxmi Sahakara Sakkare Karkhane (N), Khanpet-Ramadurga – 591123 Ramdurga Taluk, Belgaum District Order 2007 and I agree to abide by them.

Place

SIGNATURE OF THE APPLICANT.

Date

**SCHEDULE –II FORM I**
**(SEE CLAUSE 6)**

The Karnataka Sugarcane (Regulation of Distribution), Shri Dhanalaxmi Sahakari Sakkare Karkhane (N), Khanpeth-Ramadurga-591 123, Ramdurga Taluk, Belgaum District Order 2007.

Permit No. Date

1. Full name of the permit holder :
2. Father's Name :
3. Residential Adderss in full :
4. Quantity of Sugarcane for which permit is granted for export :
5. Area and village from which Sugarcane is permitted to be Exported. :
6. A. Place to which it is be exported :
   B. The purpose for which export is permitted.

i. For Sale :
ii. For crushing sugar cane juice for Manufacture of Gur/Sakkare Gul/ Jaggery Rabi or Khandasari.

7. Their permit is valid up to :

8. The permit is granted subject to the following terms and conditions. :
a) Permit is not transferable. :
b) The permit shall be produced on demand by an officer authorized by the Deputy Commissioner
c) On expiry of the validity of the permission within 48 hours of the expiry of the validity date the permit shall be surrendered to the permit issuing authority

Place

SIGNATURE OF THE APPLICANT.

Date

**ISSUING AUTHORITY**

By Order and in the name of the Governor of Karnataka,

PR- 43

**P. ANANDA KUMAR**

Desk officer (Sugar)

Commerce and Industries Department.

**NOTIFICATION**

**NO. CI 271 SGF 05 Bangalore, Dated 3rd January 2007.**

Whereas it is necessary to make an order with a view to enabling M/s. Bilagi Sugars (L), Badagandi, Bilagi Taluk, Bagalkote District, to purchase the quantity of Sugar Cane required having regard to the crushing capacity of the factory, the availability of Sugarcane in the are where sugarcane is grown and the need for production of Sugar,.

Now, therefore, in exercise of the powers conferred by clause 6,7,8 and 9 of the Sugarcane (Control) order 1966 read with CSR 1127, dated 16th July 1966 of the Government of India in the Ministry of Food, Agriculture, Community Development and Co-Operation (Department of Food) the Government of Karnataka hereby makes the following orders namely:-

1 TITLE, COMMENCEMENT AND DURATION OF OPERATION:

i) This Order may be called the Karnataka Sugarcane (Regulation of Distribution) M/s. Bilagi Sugars (L), Badagandi, Bilagi Taluk, Bagalkote District order 2007

ii) It shall come into force at once and shall remain in force till withdrawn or repealed subject to amemdments as the State Government may make from time to time.

2. DEFINITIONS :- In this order:-

a. Factory means the premises of the factory at Badagandi, Owned by M/s. Bilagi Sugars (L), badagandi, Bilagi Taluk, Bagalkote District, including the precincts of such factory.

b. `Form' means a form appended to this order.

c. Words and expressions used in this order but not defined shall have the meaning assigned to them in clause 2 of the Sugarcane (Control) order 1996.

3. Determination of the quantity of Sugarcane required by the factory and reservation of the area for supply of sugarcane.

i) The crushing capacity of M/s. Bilagi Sugars Ltd., being 2500 TCD. The quantity of Sugarcane required by the factory during a years is about 4.5 Lakh M. Ts to 5 Lakh M.Ts.

ii) The factory shall secure the sugarcane determined under sub clause (2) from the areas specified in schedule-I to this order which shall be the area reserved temporarily in the interest of farmers for supplying sugarcane to the factory concerned, till the new factories, likely to come up in that area are established.

4. FIXIATION OF QUANTITY OF SUGARCANE TO BE SUPPLIED BY THE GROWER:-

Every grower of sugarcane in the area reserved temporarily as specified in Schedule -I shall supply to the factory ninety five percent of the sugarcane grown by each such grower Co-operative Society operating in the reserved area, through such society.

5. AGREEMENT TO SUPPLY OR PURCHASE THE DETERMINED QUANTITY OF SUGARCANE.

Every grower of sugarcane or a sugarcane power Co-operative Society, supplying sugarcane to the factory and the factory shall enter in to agreement to supply or purchase as the case may be, the quantity of sugarcane determined under clause-4

6. PROHIBITION OF EXPORT OF SUGARCANE FROM AREA RESERVED TEMPORARILY.

No. Sugarcane shall be exported from the are a reserved temporarily except under and in accordance with the conditions of a permit issued by the Deputy Commissioner in Form-I of Schedule-II

7. ISSUE OF PERMITS:

i. Application for the grant of a permit under clause-6 shall be made in form 2 of Schedule-II and shall be accompanied by a fee of Rs. 5/- and an amount of Rs. 100/- as security Deposit.
ii. If any condition of the permit is contravened, the Deputy Commissioner may after giving an opportunity to the person Concerned to show cause why the amount deposited by way of security or any part there of may not be forfeited, pass order forfeiting the whole or part of the amount deposited as security.

By Order and in the name of the Governor of Karnataka,
**P. ANANDA KUMAR**
Desk officer (Sugar)
Commerce and Industries Department.

**SCHEDULE I**

Following 8 villages of Bilagi Taluk are withdrawn from m/s. Gem Sugars Ltd, Kundargi, Bilagi Taluk are now allocated temporarily to M.s. BilagiSugars Ltd, Badagandi, Bilagi Taluk, Bagalkot District, for supply of Sugarcane.

1. Badagandi
2. Bilagi
3. Korthi
4. Girisagar
5. Rolla
6. Mannikeri
7. Sonna
8. Thammaramatti

**P. ANANDA KUMAR**
Desk officer (Sugar)
Commerce abd Industries Department.

**SCHEDULE –II – FORM -1**
**(SEE CLAUSE 6)**

The Karnataka Sugarcane (Regulation of Distribution), M/s. Balagi Sugars (L) Badagandi, Bilagi Taluk, Bagalkote District Order 2007..

Permit No. Date

1. Full name of the permt holder :
2. Father's Name :
3. Residential Adderss in full :
4. Quantity of Sugarcane for which permit is granted for export :
5. Area and village form which Sugarcane is permitted to be Exported. :
6. A. Place to which it is be exported :
   B. The purpose for which export is permitted.
i. For Sale :

ii. For crushing sugar cane juice for Manufacture of Gur/Sakkare Gul/ Jaggery Rabi or Khandasari.

7. Their permit is valid up to :

8. The permit is granted subject to the following terms and conditions. :

a) Permit is not transferable. :

b) The permit shall be produced on demand by an officer authorized by the Deputy Commissioner

c) On expiry of the validity of the permission within 48 hours of the expiry of the validity date the permit shall be surrendered to the permit issuing authority

Place

SIGNATURE OF THE APPLICANT.

**ISSUING AUTHORITY**

Date

**SCHEDULE –II FORM –II**

**(SEE CLAUSE 7)**

The Karnataka Sugarcane (Regulation of Distribution), M/s. Bilagi Sugars (L), Badagandi, Bilagi Taluk, Bagalkote District Order 2007.

Application for the grant of permit for exporting sugarcane form a reserved area.

1. Full Name of the Applicant :
2. Father's Name :
3. Residential Address in full :
4. Quantity of Sugarcane for which permit is requested for export :
5. Area and the village from which Sugarcane is intended to be exported :
6. The purpose for which the export Is intended :

i) For Sale :

ii) For Crushing Sugarcane Juice or manufacture of Gur/Sakkare Gul/Jaggery/Rabi/or Khandasari :

For sale or self consumption :

I declare that, I am fully aware of the provision of the Karnataka Sugarcane (Regulation of Distribution), Shri, M/s. Bilagi Sugars (L), Badagandi, Bilagi Taluk, Bagalkote District order 2007 and the particulars furnished in the application are true to the best of my knowledge and belief and the permit to be issued will be properly used for the purpose for which it is issued, I have actually read-got read and understood the conditions of the permit given in Form No.1 of the Schedule appended to the Karnataka Sugarcane (Regulation of Distribution), M/s. Bilagi Sugars (L), Badagandi, Bilagi Taluk, bagalkote District Order 2007. and I agree to abide by them.

Place

SIGNATURE OF THE APPLICANT.

Date

By Order and in the name of the Governor of Karnataka,

PR- 44

**P. ANANDA KUMAR**

Desk officer (Sugar)

Commerce and Industries Department.

**ಸಿಬ್ಬಂದಿ ಮತ್ತು ಆಡಳಿತ ಸುಧಾರಣ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ: ಸಿಆಸುಇ : 10 ಎಚ್‌ಎಚ್‌ಎಲ್ 2006 ಬೆಂಗಳೂರು, ದಿನಾಂಕ: 13ನೇ. ಜನವರಿ, 2007.**

ಭಾರತ ಸರ್ಕಾರದ ಒಳಾಡಳಿತ ವ್ಯವಹಾರಗಳ ಇಲಾಖೆಯ ಕ್ರಮಾಂಕ: 20:25:26 ಪಿಯುಬಿ 1, ದಿನಾಂಕ: 15–06–1957ರ ಅಧಿಸೂಚನೆಯಲ್ಲಿ ಪ್ರಸ್ತಾಪಿಸಲಾಗಿರುವ ನೆಗೋಷಿಯಬಲ್ ಇನ್ಸ್‌ಟ್ರುಮೆಂಟ್ಸ್ ಆಕ್ಟ್ 1881ರ (1881ರ ಅಧಿನಿಯಮ ಸಂ. 26) 25ನೇ ಸೆಕ್ಷನ್‌ನಲ್ಲಿರುವ ವಿವರಣೆಯಂತೆ "ಉತ್ತರಾಯಣ ಪುಣ್ಯಕಾಲ ಸಂಕ್ರಾಂತಿ ಹಬ್ಬ" ಪ್ರಯುಕ್ತ ದಿನಾಂಕ: 15–01–2007ರ ಸೋಮವಾರದಂದು ಹೆಚ್ಚುವರಿಯಾಗಿ ಕರ್ನಾಟಕ ರಾಜ್ಯದಾದ್ಯಂತ ಸಾರ್ವಜನಿಕ ರಜೆಯನ್ನು ಸರ್ಕಾರವು ಘೋಷಿಸಿದೆ. ಈ ರಜೆಯನ್ನು ಸರ್ಕಾರದ ಅಧಿಸೂಚನೆ–2ರ ಸಂಖ್ಯೆ: ಸಿಆಸುಇ 10 ಎಚ್‌ಎಚ್‌ಎಲ್ 2006, ದಿನಾಂಖ: 17–11–2006 ರಲ್ಲಿಯ ಕ್ರಮ ಸಂಖ್ಯೆ: 1ರಲ್ಲಿ ಸೇರಿಸಿಕೊಂಡು, ಕ್ರಮ ಸಂಖ್ಯೆ–1ನ್ನು 1ಎ ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಎಸ್. ತಿಪ್ಪೇಸ್ವಾಮಿ.
ಸರ್ಕಾರದ ಅಧೀನ ಕಾರ್ಯದರ್ಶಿ
ಸಿಆಸುಇ (ರಾಜ್ಯ ಶಿಷ್ಟಾಚಾರ)

**PERSONNEL AND ADMINISTRATIVE REFORMS SECRETARIAT**
**NOTIFICATION**
**No. DPAR 10 HHL, 2006, Bangalore, Dated: 13 th. January , 2007**

Under the explanation of section 25 of the Negotiable Instruments Act 1881 (Act No. XXVI of 1881) read with Notification No. 20/25/26/Pub-1 dated 15-6-1957 of the Government of India, Ministry of Home Affairs, the Government of Karnataka has declared additional holiday throughout the State on account of `` Uttarayana Punya Kala Makara Sankranthi'' on Monday, the 15th January 2007. This shall be added in Sl. No. 1 and Sl No. 1 will be read as Sl. No. 1A of the Government Notification-II No. DPAR 10 HHL 2006 dated 17-11-2006

By Order and in the name of the Governor of Karnataka,
**S. THIPPESWAMY**
PR- 52 Under Secretary To Government,
DPAR (Protocol)

**ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ: ಸಿಐ: 150: ಎಂಎಂಎನ್:2006 ಬೆಂಗಳೂರು, ದಿನಾಂಕ: 22ನೇ. ಜನವರಿ, 2007.**

ದಿನಾಂಕ: 04–01–2007 ರ ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಐ 150 ಎಂಎಂಎನ್ 2006 ರಲ್ಲಿ ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು, ಶ್ರೀ ಆದಿಚುಂಚನಗಿರಿ ಮಹಾಸಂಸ್ಥಾನ ಮಠ ಶ್ರೀಕ್ಷೇತ್ರದ 5 ಕಿ.ಮೀ ವ್ಯಾಪ್ತಿಯಲ್ಲಿ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994 ರ ನಿಯಮ 8(3)ರಡಿಯಲ್ಲಿ ಎಲ್ಲಾ ರೀತಿಯ ಕಲ್ಲು ಗಣಿಗಾರಿಕೆಯನ್ನು ನಿಷೇಧಿಸಿರುವುದನ್ನು ಮಾರ್ಪಟಿಸಿ, ಮಹಾಸಂಸ್ಥಾನ ಮಠ ಶ್ರೀಕ್ಷೇತ್ರದ 1.5 ಕಿ.ಮೀ. (ಒಂದೂವರೆ ಕಿಲೋ ಮೀಟರ್‌ಗಳು) ಸುತ್ತಳತೆಯಲ್ಲಿ ಎಲ್ಲಾ ರೀತಿಯ ಕಲ್ಲುಗಣಿಗಾರಿಕೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ನಿಷೇದಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಹೆಚ್. ವಿ. ರಾಮಚಂದ್ರರಾವ್**
ಪಿ.ಆರ್. 54 ಪೀಠಾಧಿಕಾರಿ(ಗಣಿ)
ವಾಣಿಜ್ಯ ಮತ್ತುಕೈಗಾರಿಕೆ ಇಲಾಖೆ.

**ಇಂಧನ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ: ಇಎನ್ 69 ಸಮನ್ವಯ 2006 (1) 2006 ಬೆಂಗಳೂರು, ದಿನಾಂಕ: 20ನೇ. ಜನವರಿ, 2007.**

ಕರ್ನಾಟ ವಿದ್ಯುತ್ ನಿಗಮ ನಿಯಮಿತ, ಬೆಂಗಳೂರು ಇದರ ಮೆಮೊರ್‍ಯಾಂಡಮ್ ಆಫ್ ಅಸೋಸಿಯೇಷನ್ ಮತ್ತು ಆರ್ಟಿಕಲ್ಸ್ ಆಫ್ ಅಸೋಸಿಯೇಷನ್ ಕಲಂ, 22 (1)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಚಂದ್ರಶೇಖರಪ್ಪ, ಸರ್ಕಾರದ ಕಾರ್ಯದರ್ಶಿ, ಜಲ ಸಂಪನ್ಮೂಲ ಇಲಾಖೆ ಇವರನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಇದರ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್. ಬಿ. ಕೃಷ್ಣಪ್ಪನವರ್**
ಪಿ.ಆರ್. 57 ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

**ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ: ಕೃತೋಇ 1ಕೃಇಮಂ 2007 ಬೆಂಗಳೂರು, ದಿನಾಂಕ: 22ನೇ. ಜನವರಿ, 2007.**

ಕರ್ನಾಟಕ ಅಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ ಅಂತರ ನಿಯಮಾವಳಿಯ (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಅನುಚ್ಛೇದ 6 (ಎ) (iii)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಪಲ್ಗುಣಿ ರಾಜಕುಮಾರ್, ಭಾ.ಅ.ಸೇ. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಲಿಮಿಟೆಡ್‌ನ ಅಧ್ಯಕ್ಷರು ಹಾಗೂ ನಿರ್ದೇಶಕರ ಮಂಡಳಿಯ ನಿರ್ದೇಶಕರನ್ನಾಗಿ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಗುರಾಣಿ**
ಪಿ.ಆರ್. 58 ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**
**ಅಧಿಸೂಚನೆ**
**ಸಂಖ್ಯೆ ಗ್ರಾಅಪ : 41 : ರಾಗ್ರಾಉ. 06, ಬೆಂಗಳೂರು, ದಿನಾಂಕ 1ನೇ ಫೆಬ್ರವರಿ, 2007**
**ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ**
(ಕಗ್ರಾಉಖಾಯೋ)
(ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ, 2005ರ, 4ನೇ ಪ್ರಕರಣದಡಿ)

ಅಕುಶಲ ದೈಹಿಕ ಕೆಲಸ ಮಾಡಲು ಇಚ್ಛಿಸುವ ಗ್ರಾಮೀಣ ಪ್ರದೇಶಗಳಲ್ಲಿನ ವಯಸ್ಕರಿಗೆ ಪ್ರತಿ ಕುಟುಂಬಕ್ಕೆ ಒಂದು ಆರ್ಥಿಕ ವರ್ಷದಲ್ಲಿ ಕನಿಷ್ಠ ನೂರು ದಿನಗಳ ಖಾತರಿ ಉದ್ಯೋಗ ಒದಗಿಸುವುದಕ್ಕಾಗಿ, ಭಾರತ ಸರ್ಕಾರ, ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ, 2005 (ಕೇಂದ್ರ ಅಧಿನಿಯಮ ಸಂಖ್ಯೆ: 42/2005) ನ್ನು ಜಾರಿಗೆ ತಂದಿದ್ದು, ಕೇಂದ್ರ ಸರ್ಕಾರ ಕಾಲಕಾಲಕ್ಕೆ ಅಧಿಸೂಚಿಸುವ ಜಿಲ್ಲೆಗಳಲ್ಲಿ ಈ ಅಧಿನಿಯಮ ಆ ದಿನಾಂಕಗಳಿಂದ ಜಾರಿಗೆ ಬರುವುದರಿಂದಲೂ;

ಕೂಲಿಯಾದಾರಿತ ಉದ್ಯೋಗವನ್ನು ಸೃಜಿಸಿ, ಗ್ರಾಮೀಣ ಜನರ ಜೀವನಕ್ಕೆ ಭದ್ರತೆಯನ್ನು ಒದಗಿಸುವುದು ಈ ಅಧಿನಿಯಮದ ಉದ್ದೇಶವಾಗಿದ್ದು, ಇದರಲ್ಲಿ ಪ್ರಸ್ತಾಪಿಸಿರುವ ಕಾಮಗಾರಿಗಳು, ಬರಗಾಲ, ಅರಣ್ಯನಾಶ ಮತ್ತು ಮಣ್ಣಿನ ಸವೆತ ಇವುಗಳಿಂದಾಗಿ ಉದ್ಭವಿಸುವ ದೀರ್ಘಕಾಲದ ಬಡತನಕ್ಕೆ, ಪರಿಹಾರ ಸೂಚಿಸುತ್ತವೆ. ಸಮರ್ಪಕವಾಗಿ ಜಾರಿಗೊಳಿಸಿದಲ್ಲಿ, ಗ್ರಾಮೀಣ ಭಾಗದ ಬಡತನದ ಚಿತ್ರವನ್ನೇ ಬದಲಿಸುವ ಸಾಮರ್ಥ್ಯ, ಈ ಅಧಿನಿಯಮದಡಿಯಲ್ಲಿ ಸೃಜಿಸಲಾಗುವ ಉದ್ಯೋಗಕ್ಕೆ ಇರುವುದರಿಂದಲೂ;

ಅಧಿನಿಯಮದ ಅನುಷ್ಠಾನಕ್ಕಾಗಿ, ರಾಜ್ಯ ಸರ್ಕಾರಗಳು, ಅನುಸೂಚಿ-ಖ ಮತ್ತು ಅನುಸೂಚಿ-ಖಖರಲ್ಲಿ ಸೂಚಿಸಿರುವ ಕನಿಷ್ಟ ಅಂಶಗಳನ್ನು ಒಳಗೊಂಡಂತೆ, ಇತರೆ ಅಗತ್ಯ ಅಂಶಗಳೊಂದಿಗೆ, ತಮ್ಮ ರಾಜ್ಯಗಳ ರಾಜ್ಯ ಗ್ರಾಮೀಣ ಉದ್ಯೋಗ ಖಾತರಿ
ಯೋಜನೆಗಳನ್ನು ರೂಪಿಸಬೇಕಾಗಿರುವುದರಿಂದಲೂ; ಅಕುಶಲ ದೈಹಿಕ ಕೆಲಸ ಮಾಡಲು ಇಚ್ಛಿಸುವ ಗ್ರಾಮೀಣ ಪ್ರದೇಶಗಳಲ್ಲಿನ ವಯಸ್ಕರಿಗೆ, ಪ್ರತಿ ಕುಟುಂಬಕ್ಕೆ ಒಂದು ಆರ್ಥಿಕ ವರ್ಷದಲ್ಲಿ ಕನಿಷ್ಠ ನೂರು ದಿನಗಳ ಖಾತರಿ ಉದ್ಯೋಗವನ್ನು ಅಧಿನಿಯಮ ಮತ್ತು ಈ ಯೋಜನೆಯಡಿಯಲ್ಲಿನ ಷರತ್ತುಗಳಿಗೆ ಒಳಪಟ್ಟು ಒದಗಿಸಲು, ಕರ್ನಾಟಕ ಸರ್ಕಾರ, ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯನ್ನು ರೂಪಿಸಿದೆ.

ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ, 2005ರ ಪ್ರಕರಣ (4)ರ ಉಪಪ್ರಕರಣ (1) ರಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ, ಗ್ರಾಮೀಣ ಪ್ರದೇಶಗಳ ಕುಟುಂಬಗಳಿಗೆ ಖಾತರಿ ಉದ್ಯೋಗ ಒದಗಿಸಲು, ಈ ಕೆಳಗಿನಂತೆ ಉದ್ಯೋಗ ಖಾತರಿ ಯೋಜನೆಯನ್ನು ಸಿದ್ಧಪಡಿಸಿ, ಕರ್ನಾಟಕ ಸರ್ಕಾರ ಅಧಿಸೂಚನೆಯನ್ನು ಹೊರಡಿಸುತ್ತದೆ.

1. **ಸಂಕ್ಷಿಪ್ತ ಶೀರ್ಷಿಕೆ, ಪ್ರಾರಂಭ ಮತ್ತು ವ್ಯಾಪ್ತಿ:**
 (1) ಈ ಯೋಜನೆಯನ್ನು ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ (ಕಗ್ರಾಉಖಾಯೋ) ಎಂದು ಕರೆಯತಕ್ಕದ್ದು.
 (2) ಈ ಯೋಜನೆಯು, ಕರ್ನಾಟಕ ರಾಜ್ಯದ ಬೀದರ್, ಗುಲ್ಬರ್ಗಾ, ರಾಯಚೂರು, ದಾವಣಗೆರೆ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ, ಅಧಿಸೂಚಿತ ದಿನಾಂಕದಿಂದ ಹಾಗೂ ಕೇಂದ್ರ ಸರ್ಕಾರ ಅಧಿನಿಯಮವನ್ನು ಬೇರೆ ಜಿಲ್ಲೆಗಳ ಅಥವಾ ಆ ಜಿಲ್ಲೆಗಳ ಭಾಗಗಳಿಗೆ ಅಧಿಸೂಚಿಸುವ ದಿನಾಂಕಗಳಂದು, ಆ ಜಿಲ್ಲೆ ಗಳಲ್ಲಿ ಅಥವಾ ಆ ಜಿಲ್ಲೆಗಳ ಭಾಗಗಳಲ್ಲಿ ಜಾರಿಗೆ ಬರುತ್ತದೆ.

2. **ಉದ್ದೇಶಗಳು:**
 ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಉದ್ದೇಶಗಳು ಈ ಕೆಳಗಿನಂತಿವೆ:
 (1) ಅಧಿಸೂಚಿತ ಜಿಲ್ಲೆಗಳಲ್ಲಿ, ಸ್ವಯಂ ಪ್ರೇರಣೆಯಿಂದ ಅರ್ಜಿ ಸಲ್ಲಿಸುವ ಮೂಲಕ ಅಕುಶಲ ದೈಹಿಕ ಕೆಲಸ ಬಯಸುವ ಗ್ರಾಮೀಣ ಪ್ರದೇಶದ ವಯಸ್ಕ ಸದಸ್ಯರ ಪ್ರತೀ ಕುಟುಂಬಕ್ಕೆ ಒಂದು ಆರ್ಥಿಕ ವರ್ಷದಲ್ಲಿ ಕನಿಷ್ಟ ನೂರು ದಿನಗಳ ಖಾತರಿ ಉದ್ಯೋಗವನ್ನು ಒದಗಿಸಿ ಅವರ ಜೀವನಕ್ಕೆ ಭದ್ರತೆ ಒದಗಿಸುವುದು.
 (2) ದೀರ್ಘಕಾಲ ಬಾಳಿಕೆ ಬರುವ ಆಸ್ತಿಗಳನ್ನು ಸೃಜಿಸುವುದು ಮತ್ತು ಗ್ರಾಮೀಣ ಬಡವರ ಜೀವನೋಪಾಯದ ಸಂಪನ್ಮೂಲ ಆಧಾರಗಳನ್ನು ಬಲಪಡಿಸುವುದು.

3. **ರಾಜ್ಯ ಉದ್ಯೋಗ ಖಾತರಿ ನಿಧಿ:**
 ರಾಜ್ಯ ಸರ್ಕಾರ, ಅಧಿಸೂಚನೆಯ ಮೂಲಕ ರಾಜ್ಯ ಉದ್ಯೋಗ ಖಾತರಿ ನಿಧಿಯನ್ನು ಸ್ಥಾಪಿಸಿ, ಯೋಜನೆಯ ಉದ್ದೇಶಗಳಿಗಾಗಿ ನಿಯಮಾನುಸಾರ ಇದನ್ನು ಬಳಸತಕ್ಕದ್ದು.

4. **ನಿಧಿಯ ನಿರ್ವಹಣಾ ವಿಧಾನ:**
 (1) ಕೇಂದ್ರಸರ್ಕಾರ ಮತ್ತು ರಾಜ್ಯ ಸರ್ಕಾರ ಸುಮಾರು 90:10 ರ ಅನುಪಾತದಲ್ಲಿ ಅನುದಾನವನ್ನು ಒದಗಿಸುವ ಮೂಲಕ ಇದನ್ನು ಕೇಂದ್ರಸರ್ಕಾರ ಪ್ರಾಯೋಜಿತ ಯೋಜನೆಯನ್ನಾಗಿ ಅನುಷ್ಠಾನ ಗೊಳಿಸತಕ್ಕದ್ದು
 (2) ಕೇಂದ್ರಸರ್ಕಾರ ಒದಗಿಸುವ ಅನುದಾನವನ್ನು ಈ ಕೆಳಗಿನ ಉದ್ದೇಶಗಳಿಗಾಗಿ ಉಪಯೋಗಿಸ ತಕ್ಕದ್ದು:
  (i) ಅಕುಶಲ ಕೂಲಿ ಪಾವತಿಗಾಗಿ;
  (ii) ಸಾಮಗ್ರಿಗಳ ವೆಚ್ಚದ ಶೇ:75ರಷ್ಟನ್ನು ಭರಿಸಲು,*
  (iii) ಆಡಳಿತಾತ್ಮಕ ವೆಚ್ಚಗಳಿಗಾಗಿ;
  (iv) ಸಾಮರ್ಥ್ಯ ಅಭಿವೃದ್ಧಿಗಾಗಿ;
  (v) ಕಾರ್ಯಕ್ರಮ ಅಧಿಕಾರಿ ಮತ್ತು ಅವರ ಸಹಾಯಕ ಸಿಬ್ಬಂದಿಯ ನಿರ್ವಹಣೆಗೆ;
 (3) ರಾಜ್ಯ ಉದ್ಯೋಗ ಖಾತರಿ ನಿಧಿಯನ್ನು ಕೆಳಗಿನ ಉದ್ದೇಶಗಳಿಗಾಗಿ ಉಪಯೋಗಿಸತಕ್ಕದ್ದು:
  (i) ಸಾಮಗ್ರಿಗಳ ವೆಚ್ಚದ ಶೇ:25ರಷ್ಟನ್ನು ಭರಿಸಲು,*

(ii) ನಿರುದ್ಯೋಗ ಭತ್ಯೆ ಪಾವತಿಸಲು;
(iii) ರಾಜ್ಯ ಉದ್ಯೋಗ ಖಾತರಿ ಪರಿಷತ್ತಿನ ಆಡಳಿತಾತ್ಮಕ ವೆಚ್ಚಗಳಿಗಾಗಿ;
(iv) ಯೋಜನೆಯ ಅನುಷ್ಠಾನಕ್ಕೆ ಅಗತ್ಯವಿರುವ ಆದರೆ ಕೇಂದ್ರ ಸರ್ಕಾರದ ಮಾರ್ಗಸೂಚಿಗಳ ಪ್ರಕಾರ, ಖರ್ಚು ಮಾಡಲಾಗದ ಬಾಬ್ತುಗಳಿಗಾಗಿ:

* **ಸಾಮಗ್ರಿಗಳ ವೆಚ್ಚ,** ಸಾಮಗ್ರಿಗಳಿಗಾಗಿನ ವೆಚ್ಚ, ಕುಶಲ ಮತ್ತು ಅರೆಕುಶಲ ಕಾರ್ಮಿಕರ ಕೂಲಿ ಪಾವತಿ ಸಹ ಒಳಗೊಂಡಿರುತ್ತದೆ.

(4) ಜಿಲ್ಲಾಕಾರ್ಯಕ್ರಮ ಸಮನ್ವಯಾಧಿಕಾರಿ, ರಾಜ್ಯ ಸರ್ಕಾರದ ಮೂಲಕ ಸಲ್ಲಿಸುವ ಪ್ರಸ್ತಾವನೆಗಳಿಗೆ ಮತ್ತು ವಿನಿಯೋಗಕ್ಕೆ ಅನುಗುಣವಾಗಿ, ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರ ತಮ್ಮ ಪಾಲಿನ ಅನುದಾನಗಳನ್ನು, ಜಿಲ್ಲೆಗಳಿಗೆ ನೇರವಾಗಿ ಬಿಡುಗಡೆ ಮಾಡಬೇಕು. ತಾಲ್ಲೂಕುಗಳಿಂದ ಬಂದ ಪ್ರಸ್ತಾವನೆಗಳ ಮತ್ತು ವಿನಿಯೋಗದ ಆಧಾರದ ಮೇಲೆ ಮತ್ತು ಪರಿಶೀಲನೆಯ ನಂತರ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ, ತಾಲ್ಲೂಕುಗಳಿಗೆ ಅನುದಾನ ಬಿಡುಗಡೆ ಮಾಡುತ್ತಾರೆ. ಗ್ರಾಮಪಂಚಾಯತಿಗಳ ಪ್ರಸ್ತಾವನೆಗಳ ಪರಿಶೀಲನೆಯ ನಂತರ, ಅವುಗಳ ಬೇಡಿಕೆಯ ಮತ್ತು ವಿನಿಯೋಗದ ಆಧಾರದ ಮೇಲೆ, ಕಾರ್ಯಕ್ರಮ ಅಧಿಕಾರಿ, ಗ್ರಾಮಪಂಚಾಯತಿಗಳಿಗೆ ಅನುದಾನ ಬಿಡುಗಡೆ ಮಾಡುತ್ತಾರೆ.

5. **ಆಡಳಿತಾತ್ಮಕ ವೆಚ್ಚಗಳಿಗಾಗಿ ಅವಕಾಶ:**

ಕೇಂದ್ರಸರ್ಕಾರ, ಕಾಲಕಾಲಕ್ಕೆ ನಿಗದಿ ಪಡಿಸುವ ಪ್ರಮಾಣದಲ್ಲಿ, ಆಡಳಿತಾತ್ಮಕ ವೆಚ್ಚವನ್ನು ಮಾಡತಕ್ಕದ್ದು. ಮಾಹಿತಿ, ಶಿಕ್ಷಣ ಮತ್ತು ಸಂವಹನ, ಸಿಬ್ಬಂದಿಯ ವೆಚ್ಚ, ಕಾರ್ಯಾಚರಣೆ ಮತ್ತು ನಿರ್ವಹಣೆಯ ವೆಚ್ಚ, ಸಾಮರ್ಥ್ಯ ನಿರ್ಮಾಣ ಇತ್ಯಾದಿಗಳು ಈ ಆಡಳಿತಾತ್ಮಕ ವೆಚ್ಚದಲ್ಲಿ ಒಳಗೊಂಡಿರುತ್ತದೆ.

6. **ಸಂದಾನ ಮಾಡಲು ಬಾರದ ವಿಷಯಗಳು:**

(1) ಒಂದು ಆರ್ಥಿಕ ವರ್ಷದಲ್ಲಿ ಉದ್ಯೋಗ ಬಯಸುವ ಪ್ರತಿ ನೋಂದಾಯಿತ ಕುಟುಂಬಕ್ಕೆ ನೂರು ದಿನ ಗಳಿಗೆ ಕಡಿಮೆ ಇಲ್ಲದ ಅಕುಶಲ ಕೆಲಸವನ್ನು ಒದಗಿಸತಕ್ಕದ್ದು.
(2) ಕನಿಷ್ಟ ಹದಿನೈದು ದಿನಗಳಿಗೊಮ್ಮೆ ಕೂಲಿಯನ್ನು ಪಾವತಿಸತಕ್ಕದ್ದು.
(3) ಮಹಿಳೆಯರಿಗೆ ಮತ್ತು ಪುರುಷರಿಗೆ ಸಮಾನ ಕೂಲಿಯನ್ನು ಪಾವತಿಸತಕ್ಕದ್ದು.
(4) ಗುತ್ತಿಗೆದಾರರನ್ನು ಮತ್ತು ಜನರು ಮಾಡಬಹುದಾದ ಕೆಲಸಗಳಿಗೆ ಯಂತ್ರಗಳನ್ನು, ಬಳಸತಕ್ಕದ್ದಲ್ಲ.
(5) ಗ್ರಾಮದ ಹಂತದಲ್ಲಿ, ಗ್ರಾಮಸಭೆ ಗುರುತಿಸಿ ಗ್ರಾಮಪಂಚಾಯತಿ ಅನುಮೋದಿಸುವ; ತಾಲ್ಲೂಕು ಮಟ್ಟದಲ್ಲಿ, ತಾಲ್ಲೂಕುಪಂಚಾಯತಿ ಅನುಮೋದಿಸುವ; ಜಿಲ್ಲಾ ಮಟ್ಟದಲ್ಲಿ ಜಿಲ್ಲಾಪಂಚಾಯತಿ ಅನುಮೋದಿಸುವ; ಕಾಮಗಾರಿಗಳನ್ನು ಮಾತ್ರ ತೆಗೆದುಕೊಳ್ಳತಕ್ಕದ್ದು.

7. **ಹಕ್ಕುಗಳು ಮತ್ತು ಅಧಿಕಾರಗಳು**

(1) ಕುಟುಂಬ ಉದ್ಯೋಗ ಚೀಟಿಯಲ್ಲಿ ಹೆಸರಿರುವ ಕುಟುಂಬದ ಪ್ರತಿ ವಯಸ್ಕ ಸದಸ್ಯ ಅಕುಶಲ ದೈಹಿಕ ಕೆಲಸಕ್ಕಾಗಿ ಅರ್ಜಿ ಸಲ್ಲಿಸಲು ಹಕ್ಕುಳ್ಳವರಾಗಿರುತ್ತಾರೆ.
(2) ಒಂದು ಆರ್ಥಿಕ ವರ್ಷದಲ್ಲಿ, ಒಂದು ಕುಟುಂಬಕ್ಕೆ ನೂರು ದಿನಗಳಿಗೆ ಮೀರದಂತೆ ಆ ಕುಟುಂಬದ ಪ್ರತಿಯೊಬ್ಬ ನೋಂದಾಯಿತ ವಯಸ್ಕ ಸದಸ್ಯರ ತಾನು ಬಯಸುವಷ್ಟು ದಿನಗಳ ಅಕುಶಲ ಕೆಲಸಕ್ಕಾಗಿ ಅರ್ಜಿ ಸಲ್ಲಿಸಲು ಹಕ್ಕುಳ್ಳವರಾಗಿರುತ್ತಾರೆ.
(3) ಅಕುಶಲ ಉದ್ಯೋಗ ಕೋರಿದ ಹದಿನೈದು ದಿನಗಳು ಅಥವಾ ಮುಂಗಡ ಅರ್ಜಿಯಲ್ಲಿ ಸೂಚಿಸಿದ ದಿನಾಂಕ ಇವುಗಳಲ್ಲಿ ಯಾವುದು ನಂತರವೋ ಅದರ ಒಳಗಾಗಿ ಉದ್ಯೋಗ ಒದಗಿಸದಿದ್ದಲ್ಲಿ, ಆ ಅರ್ಜಿದಾರರು, ಆ ಆರ್ಥಿಕ ವರ್ಷದ ಮೊದಲ ಮೂವತ್ತು ದಿನಗಳಿಗೆ ಕನಿಷ್ಟ ಕೂಲಿಯ ಒಂದನೇ ನಾಲ್ಕರಷ್ಟು ಮತ್ತು ಉಳಿದ ಅವಧಿಗೆ, ಕನಿಷ್ಠ ಕೂಲಿಯ ಶೇಕಡ 50ರಷ್ಟನ್ನು, ನಿರುದ್ಯೋಗ ಭತ್ಯೆಯಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
(4) ಸಾಧ್ಯವಾದಷ್ಟು ಮಟ್ಟಿಗೆ ಕೆಲಸವನ್ನು, ಆ ಗ್ರಾಮದ ವ್ಯಾಪ್ತಿಯಲ್ಲಿ ಒದಗಿಸಬೇಕು. ಅವರು ವಾಸವಿರುವ ಗ್ರಾಮದಿಂದ ಐದು ಕಿಲೋ ಮೀಟರ್‌ಗಿಂತ ಹೆಚ್ಚಿನ ದೂರದಲ್ಲಿ ಕೆಲಸವನ್ನು ಒದಗಿಸಿದ್ದೇ ಆದರೆ, ಕನಿಷ್ಟ ಕೂಲಿಯ ಶೇಕಡ 10ರಷ್ಟನ್ನು ಹೆಚ್ಚುವರಿಯಾಗಿ, ಅವರು ಸಾರಿಗೆ ಮತ್ತು ಜೀವನ ವೆಚ್ಚವಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
(5) ಕೆಲಸ ಕೋರುವ, ನೋಂದಾಯಿತ ಅರ್ಜಿದಾರರ ಪೈಕಿ, ಕನಿಷ್ಟ ಒಂದನೇ ಮೂರರಷ್ಟಿರುವಂತೆ ಮಹಿಳೆಯರಿಗೆ, ಆದ್ಯತೆಯ ಮೇರೆಗೆ ಉದ್ಯೋಗ ಒದಗಿಸಬೇಕು.
(6) ಪಾವತಿಗೆ ಬಾಕಿಯಾದ, 15 ದಿನಗಳ ಒಳಗಾಗಿ ಕೂಲಿಯನ್ನು ಪಾವತಿಸದಿದ್ದಲ್ಲಿ, ಅವರು ಕೂಲಿ ಪಾವತಿ ಅಧಿನಿಯಮ 1936 (4/1936)ರ ಅನ್ವಯ ಪರಿಹಾರವನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.
(7) ಸಮಾನ ವೇತನ ಅಧಿನಿಯಮ 1976 (25/1976)ರ ಅನ್ವಯ ಲಿಂಗಾಧಾರಿತ ತಾರತಮ್ಯ ಮಾಡತಕ್ಕದ್ದಲ್ಲ.
(8) ಸ್ವಚ್ಛವಾದ ಕುಡಿಯುವ ನೀರು, ಮಕ್ಕಳ ಮತ್ತು ಕಾರ್ಮಿಕರ ವಿಶ್ರಾಂತಿ ಸಮಯಕ್ಕೆ ನೆರಳಿನ ವ್ಯವಸ್ಥೆ, ಕೆಲಸದ ಅವಧಿಯಲ್ಲಿ ಉಂಟಾಗಬಹುದಾದ ಸಣ್ಣ ಪುಟ್ಟ ಗಾಯಗಳಿಗಾಗಿ ಚಿಕಿತ್ಸೆ ನೀಡಲು ಸಾಕಷ್ಟು ಸಾಮಗ್ರಿಗಳಿರುವ ಪ್ರಥಮ ಚಿಕಿತ್ಸೆಯ ಪೆಟ್ಟಿಗೆ, ಮಹಿಳೆಯರಿಗೆ ಮತ್ತು ಪುರುಷರಿಗೆ ಪ್ರತ್ಯೇಕ ಶೌಚಾಲಯದ ವ್ಯವಸ್ಥೆ ಇವುಗಳನ್ನು ಕಾಮಗಾರಿಯ ಸ್ಥಳದ ಸಮೀಪ ಒದಗಿಸಬೇಕು.
(9) ಕಾಮಗಾರಿಯ ಸ್ಥಳಕ್ಕೆ ಆರುವರ್ಷಕ್ಕೂ ಕಡಿಮೆ ವಯಸ್ಸಿನ, ಐದಕ್ಕಿಂತ ಹೆಚ್ಚಿನ ಮಕ್ಕಳು ಕಾರ್ಮಿಕರೊಂದಿಗೆ ಬಂದಲ್ಲಿ, ಅವರನ್ನು ನೋಡಿಕೊಳ್ಳಲು ಒಬ್ಬ ಮಹಿಳೆಯನ್ನು ನೇಮಿಸಬೇಕು ಮತ್ತು ದಿನದ ಕನಿಷ್ಟ ಕೂಲಿಯನ್ನು ಆ ಮಹಿಳೆಗೆ ಪಾವತಿಸಬೇಕು.

(10) ಕಾಮಗಾರಿಯ ಸ್ಥಳದಲ್ಲಿ ಅಥವಾ ಕಾಮಗಾರಿಗೆ ಸಂಬಂಧಿಸಿದಂತೆ, ಕಾರ್ಮಿಕರಿಗೆ ಗಾಯಗಳಾದಲ್ಲಿ ಅವರಿಗೆ ಉಚಿತ ವೈದ್ಯಕೀಯ ಚಿಕಿತ್ಸೆ ನೀಡಬೇಕು.

(11) ಕಾಮಗಾರಿಯ ಸ್ಥಳದಲ್ಲಿ ಯಾವುದೇ ಕಾರ್ಮಿಕರಿಗೆ ಗಾಯಗಳಾಗಿ ಆಸ್ಪತ್ರೆಗೆ ದಾಖಲಾಗಬೇಕಾದ ಅಗತ್ಯ ಬಂದಲ್ಲಿ, ಅವರು ಔಷದಿ, ವೈದ್ಯಕೀಯ ಚಿಕಿತ್ಸೆ, ವಸತಿ, ಇತ್ಯಾದಿ ಉಚಿತ ವೈದ್ಯಕೀಯ ಸೌಲಭ್ಯಗಳನ್ನು ಪಡೆಯಲು
ಅರ್ಹರಾಗುತ್ತಾರೆ ಹಾಗೂ ವೈದ್ಯಕೀಯ ಚಿಕಿತ್ಸೆ ಪಡೆಯುವ ಅವಧಿಗೆ ಪ್ರತಿ ದಿನಕ್ಕೆ ಆ ದಿನದ ಕನಿಷ್ಟ ಕೂಲಿಯ ಶೇಕಡ 50 ಕ್ಕಿಂತ ಕಡಿಮೆ ಇಲ್ಲದ ಕೂಲಿಯನ್ನು ದಿನಭತ್ಯೆಯಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

(12) ಕಾಮಗಾರಿಯ ಕಾರಣದಿಂದಾಗಿ ಕಾರ್ಮಿಕರು, ಶಾಶ್ವತವಾಗಿ ಅಂಗವಿಕಲರಾದರೆ ಅಥವಾ ಮೃತ ಪಟ್ಟರೆ ಸಂದರ್ಭಕ್ಕೆತಕ್ಕಂತೆ ಅವರು ಅಥವಾ ಅವರ ವಾರಸುದಾರರು ರೂ. 25,000/- ಅಥವಾ ಕೇಂದ್ರ ಸರ್ಕಾರ ನಿಗದಿ ಪಡಿಸಬಹುದಾದ ಪರಿಹಾರವನ್ನು ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

(13) ಕಾಮಗಾರಿಯ ಸ್ಥಳದಲ್ಲಿ ಇರುವ ಮಗುವಿಗೆ ವೈಯಕ್ತಿಕ ಗಾಯಗಳಾದಲ್ಲಿ, ಶಾಶ್ವತ ಅಂಗವಿಕಲತೆಯಾದಲ್ಲಿ ಆಥವಾ ಮೃತಪಟ್ಟಲ್ಲಿ ಅವರೂ ಸಹ ಮೇಲಿನ ಕ್ರಮ ಸಂಖ್ಯೆ 10 ಮತ್ತು 12ರಲ್ಲಿ ತೋರಿಸಿರುವಂತೆ ಚಿಕಿತ್ಸೆ ಮತ್ತು ಪರಿಹಾರವನ್ನು, ಅನುಕ್ರಮವಾಗಿ ಪಡೆಯಲು ಹಕ್ಕುಳ್ಳವರಾಗಿರುತ್ತಾರೆ.

8. **ಅನುಷ್ಠಾನದ ವ್ಯವಸ್ಥೆ:**

(1) ಗ್ರಾಮಮಟ್ಟದಲ್ಲಿ, ಗ್ರಾಮಪಂಚಾಯತಿ ಯೋಜನೆಯ ಅನುಷ್ಠಾನದ ಪ್ರಮುಖ ಪ್ರಾಧಿಕಾರವಾಗಿರುತ್ತದೆ. ವಾರ್ಡ್‌ಸಭೆ ಮತ್ತು ಗ್ರಾಮಸಭೆ ಮೂಲಕ ಶಿಫಾರಸ್ಸಾಗಿ ಬರುವ ಕಾಮಗಾರಿಗಳ ಪೈಕಿ ಆದ್ಯತೆಯನ್ನು ಗುರುತಿಸಿ ಅವುಗಳನ್ನು ಅನುಷ್ಠಾನಗೊಳಿಸುವ ಮತ್ತು ಮೇಲ್ವಿಚಾರಣೆ ಮಾಡುವ ಜವಾಬ್ದಾರಿ ಗ್ರಾಮಪಂಚಾಯತಿ
ಯದ್ದಾಗಿರುತ್ತದೆ.

(2) ನೋಂದಣಿಗಾಗಿ ಸಲ್ಲಿಸುವ ಅರ್ಜಿಗಳನ್ನು ಸ್ವೀಕರಿಸಲು ಮತ್ತು ಉದ್ಯೋಗ ಚೀಟಿಗಳನ್ನು ವಿತರಿಸಲು ಗ್ರಾಮಪಂಚಾಯತಿಯ ಕಾರ್ಯದರ್ಶಿಯು ಜವಾಬ್ದಾರರಾಗಿರುತ್ತಾನೆ/ಳೆ. ಗ್ರಾಮಪಂಚಾಯತಿ ಕಾರ್ಯದರ್ಶಿಗೆ ಮತ್ತು ಕಾರ್ಯ ನಿರ್ವಹಣಾ ಏಜೆನ್ಸಿಯ ತಾಂತ್ರಿಕ ಸಿಬ್ಬಂದಿಗೆ ನೆರವಾಗಲು ಒಬ್ಬ ಗ್ರಾಮ ಅಭಿವೃದ್ಧಿ ಸಹಾಯಕ ಇರತಕ್ಕದ್ದು.

(3) ತಾಲ್ಲೂಕು ಮಟ್ಟದಲ್ಲಿ, ತಾಲ್ಲೂಕುಪಂಚಾಯತಿ ಯೋಜನೆಯ ಅನುಷ್ಠಾನದ ಪ್ರಮುಖ ಪ್ರಾಧಿಕಾರವಾಗಿರುತ್ತದೆ. ತಾಲ್ಲೂಕುಪಂಚಾಯತಿ ಯ ಕಾರ್ಯನಿರ್ವಹಣಾಧಿಕಾರಿ ಈ ಯೋಜನೆಯ ಕಾರ್ಯಕ್ರಮ ಅಧಿಕಾರಿ ಆಗಿರುತ್ತಾರೆ. ಅವರು, ಗ್ರಾಮಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿಗಳು ಈ ಯೋಜನೆ ಅಡಿಯಲ್ಲಿ ತಮ್ಮ ಕಾರ್ಯಗಳನ್ನು ನಿರ್ವಹಿಸಲು, ಸಹಾಯ ಮಾಡುತ್ತಾರೆ. ಕಾರ್ಯಕ್ರಮ ಅಧಿಕಾರಿಗೆ ಕಾಲ ಕಾಲಕ್ಕೆ ಅಗತ್ಯವಿರುವ ಸಹಾಯವನ್ನು ಒದಗಿಸತಕ್ಕದ್ದು.

(4) ಕಾರ್ಯಕ್ರಮ ಅಧಿಕಾರಿಯು, ತಾಲ್ಲೂಕು ಹಂತದಲ್ಲಿ ಈ ಯೋಜನೆಯ ವಿವಿಧ ಪ್ರಕ್ರಿಯೆಗಳ ಬಗ್ಗೆ ಸಮನ್ವಯ ಮಾಡುವ ಅತೀ ಮುಖ್ಯ ಜವಾಬ್ದಾರಿಯನ್ನು ಹೊಂದಿರುತ್ತಾರೆ. ಇವರು ಗ್ರಾಮ ಪಂಚಾಯತಿ ಸಲ್ಲಿಸುವ ಗ್ರಾಮಪಂಚಾಯತಿ ಯೋಜನೆಗಳನ್ನು ಪರಿಶೀಲಿಸಿ ಇವು ಬೇಡಿಕೆಗೆ ತಕ್ಕಂತೆ ಇರುವುದನ್ನು, ಸಮಯಕ್ಕೆ ಸರಿಯಾಗಿ ಕಾರ್ಯನಿರ್ವಹನಾ ಏಜೆನ್ಸಿಗಳು ಕೆಲಸಗಳು ಪ್ರಾರಂಭಿಸುವುದನ್ನು, ಸಮಯದ ಒಳಗೆ ಕೆಲಸ ನೀಡುವುದನ್ನು ಮತ್ತು ಅಕುಶಲ ಕಾರ್ಮಿಕರಿಗೆ ಲಭ್ಯವಿರುವ ಹಕ್ಕುಗಳು ಒದಗುವಂತೆ ಮಾಡಲು ಜವಾಬ್ದಾರರಾಗಿರುತ್ತಾರೆ. ಗ್ರಾಮಸಭೆಗಳ ಮೂಲಕ ಸಾಮಾಜಿಕ ಲೆಕ್ಕ ಪರಿಶೋಧನೆ ಮಾಡಿಸುವುದು, ಸಾರ್ವಜನಿಕ ಕುಂದು-ಕೊರತೆಗಳನ್ನು ವಿಚಾರಣೆ ಮಾಡುವುದೂ ಸಹ ಅವರ ಮುಖ್ಯ ಕೆಲಸವಾಗಿರುತ್ತದೆ. ತಾಲ್ಲೂಕು ಪಂಚಾಯತಿ ಈ ಯೋಜನೆಯಡಿ ತನ್ನ ಕರ್ತವ್ಯಗಳನ್ನು ನಿರ್ವಹಿಸಲು ಇವರು ಸಹಾಯ ಮಾಡುತ್ತಾರೆ. ಕಾರ್ಯಕ್ರಮ ಅಧಿಕಾರಿ ಜಿಲ್ಲಾ ಕಾರ್ಯಕ್ರಮಸಮನ್ವಯಾಧಿಕಾರಿಯ ನಿರ್ದೇಶನ, ನಿಯಂತ್ರಣ ಮತ್ತು ಮೇಲ್ವಿಚಾರಣೆಗೆ ಒಳಪಟ್ಟಿರುತ್ತಾರೆ ಮತ್ತು ತಾಲ್ಲೂಕುಪಂಚಾಯತಿಗೆ ಜವಾಬ್ದಾರರಾಗಿರುತ್ತಾರೆ.

(5) ಕಾರ್ಯಕ್ರಮ ಅಧಿಕಾರಿಗೆ ಸಹಾಯ ಮಾಡಲು ಪ್ರತಿ ತಾಲ್ಲೂಕುಪಂಚಾಯತಿಯಲ್ಲಿ ಒಬ್ಬ ಸಹಾಯಕ ಕಾರ್ಯಕ್ರಮ ಅಧಿಕಾರಿ ಇರತಕ್ಕದ್ದು. ಪೂರ್ಣ ಕಾಲಿಕ ಸಹಾಯಕ ಕಾರ್ಯಕ್ರಮ ಅಧಿಕಾರಿಯನ್ನು ನಿಯೋಜನೆ ಅಥವಾ ಗುತ್ತಿಗೆ ಆಧಾರದ ಮೇರೆಗೆ ನೇಮಿಸಿಕೊಳ್ಳಬಹುದು.

(6) ಜಿಲ್ಲಾ ಮಟ್ಟದಲ್ಲಿ ಈ ಯೋಜನೆಯ ಅನುಷ್ಠಾನದ ಪ್ರಮುಖ ಪ್ರಾಧಿಕಾರ ಜಿಲ್ಲಾಪಂಚಾಯತಿಯಾಗಿರುತ್ತದೆ. ತಾಲ್ಲೂಕುಪಂಚಾಯತಿ, ಸಂಪರ್ಕ ಇಲಾಖೆಗಳು, ಇತರೆ ಅನುಷ್ಠಾನ ಏಜೆನ್ಸಿಗಳಾದ; ಸ್ಥಳೀಯ ಪ್ರಾಧಿಕಾರಗಳು, ಕೇಂದ್ರ ಅಥವಾ ರಾಜ್ಯ ಸರ್ಕಾರದಿಂದ ಮನ್ನಣೆ ಹಾಗೂ ಉತ್ತಮ ಕೆಲಸ ನಿರ್ವಹಿಸಿದ; ಸ್ಥಳೀಯ ಸಂಸ್ಥೆಗಳು, ಸರ್ಕಾರೇತರ ಸಂಸ್ಥೆಗಳು; ಕೇಂದ್ರ ಮತ್ತು ರಾಜ್ಯ ಸರ್ಕಾರದ ಪ್ರಧಾನ ಷೇರು ಹೊಂದಿರುವ, ಸಹಕಾರಿ ಸಂಘಗಳು, ಸ್ವಸಹಾಯ ಗುಂಪುಗಳು; ಯೋಜನೆಯಡಿ, ಅನುಷ್ಠಾನಕ್ಕೆ ಸಿದ್ದಪಡಿಸಿ ಸಲ್ಲಿಸುವ ಕಾಮಗಾರಿಗಳ ಪ್ರಸ್ತಾವನೆಗಳ ಜೊತೆ, ತಾನು ಅನುಷ್ಠಾನಗೊಳಿಸಲು ಸಿದ್ದಪಡಿಸಿರುವ, ಈ ಎಲ್ಲ ಕಾಮಗಾರಿಗಳ ಪ್ರಸ್ತಾವನೆಯನ್ನೊಳಗೊಂಡ ಜಿಲ್ಲಾ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಗಳ ಪ್ರಸ್ತಾವನೆಯನ್ನು ಅನುಮೋದಿಸತಕ್ಕದ್ದು. ಜಿಲ್ಲಾ ಮತ್ತು ತಾಲ್ಲೂಕುಮಟ್ಟದಲ್ಲಿ ಯೋಜನೆಯ ಅನಷ್ಠಾನದ ಪರಿಶೀಲನೆ, ಮೇಲ್ವಿಚಾರಣೆಯನ್ನು ಸಹ ಜಿಲ್ಲಾ ಪಂಚಾಯತಿ ಮಾಡತಕ್ಕದ್ದು.

(7) ಜಿಲ್ಲಾಪಂಚಾಯತಿಯ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಈ ಯೋಜನೆಯಡಿ ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಯಾಗಿರುತ್ತಾರೆ. ಇವರಿಗೆ ಕಾಲ ಕಾಲಕ್ಕೆ ಅಗತ್ಯವಿರುವ ಸಹಾಯವನ್ನು ಒದಗಿಸತಕ್ಕದ್ದು.

(8) ರಾಜ್ಯಮಟ್ಟದಲ್ಲಿ, ಈ ಯೋಜನೆಯ ಉಸ್ತುವಾರಿಯನ್ನು ನೋಡಿಕೊಳ್ಳುತ್ತಿರುವ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ, ರಾಜ್ಯ ಕಾರ್ಯಕ್ರಮ ಸಮನ್ವಯಾಧಿಕಾರಿಯಾಗಿರುತ್ತಾರೆ. ಇವರಿಗೆ ಕಾಲಕಾಲಕ್ಕೆ ಅಗತ್ಯವಿರುವ ಸಹಾಯವನ್ನು, ನಿರ್ದೇಶಕರು, ವಿಷಯ ತಜ್ಞರು ಮತ್ತು ಇತರೆ ಸಿಬ್ಬಂದಿ ಮಾಡತಕ್ಕದ್ದು.

(9) ರಾಜ್ಯ ಸರ್ಕಾರ, ಉದ್ಯೋಗ ಖಾತರಿ ನಿಧಿಯನ್ನು ಸ್ಥಾಪಿಸತಕ್ಕದ್ದು,ರಾಜ್ಯದಪಾಲನ್ನು ಬಿಡುಗಡೆ ಮಾಡಲು ಅಗತ್ಯವಿರುವ ಅನುದಾನವನ್ನು ಆಯವ್ಯಯದಲ್ಲಿ ಒದಗಿಸತಕ್ಕದ್ದು, ನಿಗದಿತ ಗ್ರಾಮೀಣ ದರಗಳ ಅನುಸೂಚಿ ಪ್ರಕಟಿಸತಕ್ಕದ್ದು, ಯೋಜನೆಯ ಪರಿಣಾಮಗಳನ್ನು ತಿಳಿಯಲು, ಮೌಲ್ಯಮಾಪನಗಳನ್ನು ಮಾಡಿಸತಕ್ಕದ್ದು. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮ 2005ರ ಪ್ರಕರಣ 12(1)ರ ಅಡಿಯಲ್ಲಿ, ರಾಜ್ಯ ಉದ್ಯೋಗ ಖಾತರಿ ಪರಿಷತ್ತನ್ನು ರಚಿಸತಕ್ಕದ್ದು. ಕರ್ನಾಟಕ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಉದ್ದೇಶಗಳಿಗೆ ಸಂಬಂಧಿಸಿದಂತೆ ಉದ್ಯೋಗ ಖಾತರಿ ಪರಿಷತ್ತು, ಮೇಲ್ವಿಚಾರಣೆ ಮತ್ತು ಸಲಹಾ ಸಮಿತಿಯಾಗಿ ಕಾರ್ಯ ನಿರ್ವಹಿಸ ತಕ್ಕದ್ದು.

(10) ಈ ಯೋಜನೆಯಡಿಯಲ್ಲಿ ಕೆಲಸ ಮಾಡುವ ಕಾರ್ಮಿಕರ ಹಕ್ಕುಗಳ ಸಂರಕ್ಷಣೆ, ಸಾಮರ್ಥ್ಯ ನಿರ್ಮಾಣ, ಸಾಮಾಜಿಕ ಲೆಕ್ಕಪರಿಶೋಧನೆ ಇತ್ಯಾದಿ ಪ್ರಕ್ರಿಯಗಳ ಮೇಲ್ವಿಚಾರಣೆಗೆ ಅನುಕೂಲ ವಾಗುವಂತೆ ಸರ್ಕಾರೇತರ ಸಂಸ್ಥೆಗಳು ಪಾಲುದಾರರಂತೆ ಬಾಗವಹಿಸಬಹುದು.

**9. ನೋಂದಣಿ ಮತ್ತು ಉದ್ಯೋಗ ಚೀಟಿ ವಿತರಣೆ**

(1) ಈ ಯೋಜನೆಯಡಿ ನೋಂದಣಿಗಾಗಿ ಮತ್ತು ಉದ್ಯೋಗ ಚೀಟಿಗಾಗಿ, ಕುಟುಂಬದ ವಯಸ್ಕ ಸದಸ್ಯರ ಹೆಸರು, ವಯಸ್ಸು, ವಿಳಾಸ ಇತ್ಯಾದಿ ವಿವರಗಳನ್ನು ದಾಖಲಿಸಿ, ತಾನು ವಾಸವಿರುವ ಗ್ರಾಮಪಂಚಾಯತಿಗೆ ನಮೂನೆ-1 ರಲ್ಲಿ, ಆ ಕುಟುಂಬದ ಯಾವುದೇ ವಯಸ್ಕ ಸದಸ್ಯ ಅರ್ಜಿ ಸಲ್ಲಿಸಬೇಕು. ಅರ್ಜಿದಾರರಿಗೆ ಗ್ರಾಮಪಂಚಾಯತಿ ಕಾರ್ಯದರ್ಶಿ, ದಿನಾಂಕ ಸೂಚಿಸುವ ಸ್ವೀಕೃತಿ ನೀಡಿ, ವಿವರಗಳನ್ನು ಅರ್ಜಿಗಳ ನೋಂದಣಿ ವಹಿ (ನಮೂನೆ-2) ಮತ್ತು ಉದ್ಯೋಗಾಕಾಂಕ್ಷಿಗಳ ಮತ್ತು ಉದ್ಯೋಗದ ವಹಿ (ನಮೂನೆ-3) ರಲ್ಲಿ ದಾಖಲಿಸಬೇಕು. ಗ್ರಾಮಪಂಚಾಯತಿ ಕಾರ್ಯದರ್ಶಿ ಅಗತ್ಯ ವಿಚಾರಣೆ ಮಾಡಿ ನಂತರ ಉದ್ಯೋಗ ಚೀಟಿಯನ್ನು ವಿತರಿಸಬೇಕು.

(2) ನೋಂದಾಯಿತ ಪ್ರತಿ ಕುಟುಂಬಕ್ಕೆ ಪ್ರತ್ಯೇಕ ಸಂಖ್ಯೆ ಇರುವ ಕುಟುಂಬ ಉದ್ಯೋಗ ಚೀಟಿಯನ್ನು ಗ್ರಾಮಪಂಚಾಯತಿಯ ಕಾರ್ಯದರ್ಶಿ ನಮೂನೆ-4ರಲ್ಲಿ ಇರುವಂತೆ ವಿತರಿಸಬೇಕು. ಈ ವಿವರಗಳನ್ನು ಅವರು ಕುಟುಂಬ ಉದ್ಯೋಗ ಚೀಟಿ ವಿತರಣಾ ವಹಿ (ನಮೂನೆ-5) ಯಲ್ಲಿ ದಾಖಲಿಸಬೇಕು. ಉದ್ಯೋಗ ಚೀಟಿ ನೀಡಿದ ಒಂದು ತಿಂಗಳ ಒಳಗಾಗಿ ಕುಟುಂಬದ ನೋಂದಾಯಿತ ಪ್ರತಿ ಸದಸ್ಯರ ಸ್ಟ್ಯಾಂಪ್ ಅಳತೆಯ ಬಾವಚಿತ್ರಗಳನ್ನು ಉದ್ಯೋಗ ಚೀಟಿಗೆ ಅಂಟಿಸಬೇಕು.

(3) ನೀಡಿದ ಕೂಲಿಯ ದಿನಗಳ ಮತ್ತು ಪಾವತಿಸಿದ ಕೂಲಿಯ ವಿವರಗಳನ್ನು ಕುಟುಂಬ ಉದ್ಯೋಗ ಚೀಟಿಯಲ್ಲಿ ಹಾಗೂ ಉದ್ಯೋಗಾಕಾಂಕ್ಷಿಗಳ ಮತ್ತು ಉದ್ಯೋಗದ ವಹಿಯಲ್ಲಿ ಗ್ರಾಮ ಪಂಚಾಯತಿ ಕಾರ್ಯದರ್ಶಿ ಆಗಿಂದಾಗ್ಗೆ ದಾಖಲಿಸಬೇಕು.

(4) ಹೆಚ್ಚುವರಿ ಸದಸ್ಯರನ್ನು ಉದ್ಯೋಗ ಚೀಟಿಯಲ್ಲಿ ಸೇರಿಸುವ ಅಥವಾ ತೆಗೆದುಹಾಕುವ ಕಾರ್ಯವನ್ನು ಅಗತ್ಯ ವಿದ್ದಾಗಲೆಲ್ಲ ಮಾಡಬೇಕು ಮತ್ತು ಈ ರೀತಿ ನವೀಕರಿಸಿದ ವಿವರಗಳ ಪಟ್ಟಿಯನ್ನು ಪ್ರತಿ ತಿಂಗಳು ಕಾರ್ಯಕ್ರಮ ಅಧಿಕಾರಿಗೆ ಕಳುಹಿಸಿಕೊಡಬೇಕು.

(5) ಮೂಲ ಉದ್ಯೋಗ ಚೀಟಿ ಕಳೆದುಹೋದಲ್ಲಿ ಅಥವಾ ಹರಿದುಹೋದಲ್ಲಿ ಉದ್ಯೋಗ ಚೀಟಿಯ ನಕಲಿಗಾಗಿ ಗ್ರಾಮಪಂಚಾಯತಿಗೆ ನಿಗದಿತ ಶುಲ್ಕಪಾವತಿಸಿ, ಅರ್ಜಿ ಸಲ್ಲಿಸಬಹುದು. ಇದರ ಬಗ್ಗೆ ಪರಿಶೀಲಿಸಿ, ಅರ್ಜಿ ಸ್ವೀಕರಿಸಿದ ಏಳು ದಿನಗಳ ಒಳಗಾಗಿ, ಗ್ರಾಮಪಂಚಾಯತಿ ಕಾರ್ಯದರ್ಶಿ ಉದ್ಯೋಗ ಚೀಟಿಯ ನಕಲನ್ನು ಅರ್ಜಿದಾರರಿಗೆ ವಿತರಿಸಬೇಕು.

**10. ಕೆಲಸಕ್ಕಾಗಿ ಅರ್ಜಿ ಹಾಗೂ ಉದ್ಯೋಗ ನೀಡಿಕೆ**

(1) ಉದ್ಯೋಗ ಚೀಟಿ ಹೊಂದಿದ ಕಾರ್ಮಿಕರು, ವೈಯಕ್ತಿಕವಾಗಿ ಅಥವಾ ಒಟ್ಟಾಗಿ ಉದ್ಯೋಗದ ಬೇಡಿಕೆಯ ವಿವರಗಳನ್ನು ನಮೂನೆ-6ರಲ್ಲಿ ದಾಖಲಿಸಿ ಕೆಲಸಕ್ಕಾಗಿ ಅರ್ಜಿ ಸಲ್ಲಿಸಬಹುದು. ಒಂದು ವರ್ಷದಲ್ಲಿ ನಿಗದಿತ ಅವಧಿಗೆ ಉದ್ಯೋಗವನ್ನು ಕೋರಿ ಮುಂಗಡ ಅರ್ಜಿಯನ್ನು ಸಹ ಸಲ್ಲಿಸಬಹುದು. ಒಬ್ಬನೇ ವ್ಯಕ್ತಿ ಅಥವಾ ಒಂದು ಗುಂಪುಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಒಮ್ಮೆಗೆ ಸಲ್ಲಿಸಬಹುದು. ಆದರೆ ಇವುಗಳಲ್ಲಿನ ಉದ್ಯೋಗ ಬೇಡಿಕೆಯ ಅವಧಿ ಬೇರೆಬೇರೆಯಾಗಿರಬೇಕು.

(2) ಉದ್ಯೋಗಕ್ಕಾಗಿ ಸಲ್ಲಿಸಿದ ಅರ್ಜಿಗಳನ್ನು ಗ್ರಾಮಪಂಚಾಯತಿ ಕಾರ್ಯದರ್ಶಿ ಸ್ವೀಕರಿಸಬೇಕು. ಕನಿಷ್ಠ ಹದಿನಾಲ್ಕು ದಿನಗಳಿಗಿಂತ ಹೆಚ್ಚಿನ ಅವಧಿಗೆ ಮತ್ತು ಒಂದು ವರ್ಷದಲ್ಲಿ ಅರ್ಜಿದಾರರ ಕುಟುಂಬ ನೂರು ದಿನಗಳನ್ನು ಪೂರೈಸದಿರುವಂತಿದ್ದಲ್ಲಿ, ಅಂತಹ ಅರ್ಜಿಗಳನ್ನು ಮಾನ್ಯತೆ ಮಾಡಬೇಕು. ಈ ರೀತಿ ಪಡೆದ ಅರ್ಜಿಗಳನ್ನು ಉದ್ಯೋಗ ಬೇಡಿಕೆವಹಿ **ನಮೂನೆ-7** ರಲ್ಲಿ ದಾಖಲಿಸಬೇಕು.

(3) ಮುಂಗಡ ಅರ್ಜಿಯಲ್ಲಿ ಉದ್ಯೋಗ ಕೋರಿದ ದಿನಾಂಕ ಅಥವಾ ಇತರೆ ಅರ್ಜಿ ಸಲ್ಲಿಸಿದ ದಿನಾಂಕದಿಂದ ಹದಿನೈದು ದಿನಗಳು, ಇವುಗಳ ಪೈಕಿ ಯಾವುದು ನಂತರವೋ ಅಷ್ಟರ ಒಳಗಾಗಿ ಚಾಲ್ತಿಯಲ್ಲಿರುವ ಅಥವಾ ಹೊಸದಾಗಿ ಪ್ರಾರಂಭಿಸುವ ಕಾಮಗಾರಿಗಳಲ್ಲಿ, ಉದ್ಯೋಗಕ್ಕಾಗಿ ಅರ್ಜಿಸಲ್ಲಿಸಿದವರಿಗೆ ಗ್ರಾಮಪಂಚಾಯತಿ ಉದ್ಯೋಗ ನೀಡಿ, ನಮೂನೆ-8 ರಲ್ಲಿ ನೋಟೀಸ್‌ನ್ನು ಜಾರಿಮಾಡಬೇಕು ಮತ್ತು ಇದನ್ನು ನಮೂನೆ-9 ರಲ್ಲಿ ಸಹ ಸಾರ್ವಜನಿಕರ ತಿಳುವಳಿಕೆಗಾಗಿ ಪ್ರಚುರಪಡಿಸಬೇಕು.

(4) ಅಂಗವಿಕಲ ವ್ಯಕ್ತಿಗಳಿಗೆ ಯೋಜನೆಯ ಬಾಗವಾಗಿರುವ ಹಾಗೂ ಸೂಕ್ತವಿರುವ ಕೂಲಿ ಕೆಲಸಗಳನ್ನು ವಹಿಸಬೇಕು.

(5) ಒಂದುವೇಳೆ ಒಂದು ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಅರ್ಜಿದಾರರರಿಗೆ ಕೆಲಸವನ್ನು ಕೊಡಲು ಸಾಧ್ಯವಾಗದಿದ್ದಲ್ಲಿ, ಅವರ ಅರ್ಜಿಗಳನ್ನು ಗ್ರಾಮಪಂಚಾಯತಿ ಕಾರ್ಯದರ್ಶಿ, ಕಾರ್ಯಕ್ರಮ ಅಧಿಕಾರಿಗೆ ಸಲ್ಲಿಸಬೇಕು. ಕಾರ್ಯಕ್ರಮ ಅಧಿಕಾರಿಯು ಆ ತಾಲ್ಲೂಕಿನಲ್ಲಿನ ಇತರೆ ಗ್ರಾಮಪಂಚಾಯತಿಯಲ್ಲಿ ಲಭ್ಯವಿರಬಹುದಾದ ಕೆಲಸಕ್ಕೆ ಇವರನ್ನು ತೊಡಗಿಸಲು ಅಗತ್ಯವಿರುವ ಸಮನ್ವಯತೆ ಮಾಡಿ, ಉದ್ಯೋಗ ನೀಡಿಕೆ ಪತ್ರವನ್ನು ಹೊರಡಿಸಿ ಅದನ್ನು ಸಂಬಂಧಿಸಿದ ಎರಡೂ ಗ್ರಾಮಪಂಚಾಯತಿಗಳ ಕಾರ್ಯದರ್ಶಿಗಳಿಗೆ ಕಳುಹಿಸಬೇಕು.

11. **ನಿರುದ್ಯೋಗ ಭತ್ಯೆ ಪಾವತಿ:**

(1) ಅಕುಶಲ ಉದ್ಯೋಗ ಕೋರಿ ಅರ್ಜಿ ಸಲ್ಲಿಸಿದ ಹದಿನೈದು ದಿನಗಳ ಒಳಗಾಗಿ ಅಥವಾ ಮುಂಗಡ ಅರ್ಜಿಯಲ್ಲಿ ಸೂಚಿಸಿದ ದಿನಾಂಕ ಇವುಗಳಲ್ಲಿ ಯಾವುದು ನಂತರವೋ, ಅದರ ಒಳಗಾಗಿ ಉದ್ಯೋಗ ನೀಡದಿದ್ದಲ್ಲಿ ನಿರುದ್ಯೋಗ ಭತ್ಯೆ ಪಾವತಿಗಾಗಿ ಅವರು ಗಾಮಪಂಚಾಯತಿ ಕಾರ್ಯದರ್ಶಿಗೆ ಅರ್ಜಿ ಸಲ್ಲಿಸಬಹುದು. ಈ ಅರ್ಜಿಗಳನ್ನು ಪರಿಶೀಲಿಸಿ ಅಗತ್ಯ ವಿವರಗಳೊಂದಿಗೆ, ಗಾಮಪಂಚಾಯಿತಿ ಕಾರ್ಯದರ್ಶಿ, ಕಾರ್ಯಕ್ರಮ ಅಧಿಕಾರಿಗೆ ಸಲ್ಲಿಸತಕ್ಕದ್ದು. ಕಾರ್ಯಕ್ರಮ ಅಧಿಕಾರಿ, ಇವುಗಳನ್ನು ಪರಿಶೀಲಿಸಿ, ಅರ್ಹರಿದ್ದಲ್ಲಿ ನಿರುದ್ಯೋಗ ಭತ್ಯೆಯನ್ನು ಮಂಜೂರು ಮಾಡಬೇಕು. ಅರ್ಹರಿಲ್ಲದಿದ್ದಲ್ಲಿ ಅರ್ಜಿಗಳನ್ನು ತಿರಸ್ಕರಿಸಿ ಹಿಂಬರಹ ನೀಡಬೇಕು.

(2) ಈ ಕೆಳಗಿನ ಯಾವುದೇ ಸಂದರ್ಭದಲ್ಲಿ, ಗ್ರಾಮಪಂಚಾಯತಿ, ನಿರುದ್ಯೋಗ ಭತ್ಯೆಯನ್ನು ಪಾವತಿಸಲು ಬದ್ಧರಾಗುವುದಿಲ್ಲ.

(i) ಅರ್ಜಿದಾರರು ಅಥವಾ ಅವರ ಕುಟುಂಬದ ಇತರೆ ವಯಸ್ಕ ಸದಸ್ಯ, ಕೆಲಸಕ್ಕೆ ವರದಿ ಮಾಡಿಕೊಳ್ಳುವಂತೆ
ಗಾಮಪಂಚಾಯಿತಿ ಅಥವಾ ಕಾರ್ಯಕ್ರಮ ಅಧಿಕಾರಿ ಅರ್ಜಿದಾರರಿಗೆ ಸೂಚಿಸಿದ್ದರೂ, ಅವರು ವರದಿ ಮಾಡಿಕೊಳ್ಳದೇ ಇರುವುದು.

(ii) ಅರ್ಜಿದಾರರು ಕೋರಿದ ಅವಧಿಯು ಮುಕ್ತಾಯಗೊಂಡಿದ್ದು ಆ ಕುಟುಂಬದ ಯಾವೊಬ್ಬ ಸದಸ್ಯರು ಕೆಲಸಕ್ಕೆ ಹಾಜರಾಗದೇ ಇರುವುದು.

(iii) ಆ ಕುಟಂಬ ಒಂದು ಆರ್ಥಿಕ ವರ್ಷದಲ್ಲಿ ಒಂದು ನೂರು ದಿನಗಳಿಗೆ ಸಮನಾದ ಉದ್ಯೋಗವನ್ನು ಆ ಆರ್ಥಿಕ ವರ್ಷದಲ್ಲಿ, ಈಗಾಗಲೆ ಪಡೆದಿರುವುದು;

(iv) ಒಂದು ಕುಟುಂಬ ನಿರುದ್ಯೋಗ ಭತ್ಯೆಯನ್ನೂ ಒಳಗೊಂಡಂತೆ, ಒಂದು ಆರ್ಥಿಕ ವರ್ಷದಲ್ಲಿ ಒಂದು ನೂರು
ದಿನಗಳಿಗೆ ಲಭ್ಯವಾಗುವಷ್ಟು, ಕೂಲಿಯನ್ನು ಪಡೆದಿರುವುದು;

12. **ಕಾಮಗಾರಿಗಳ ವಿಧ:**

ಈ ಯೋಜನೆಯಡಿಯಲ್ಲಿ, ಈ ಕೆಳಗಿನ ಆದ್ಯತೆಯಂತೆ ಕಾಮಗಾರಿಗಳನ್ನು ತೆಗೆದುಕೊಳ್ಳತಕ್ಕದ್ದು.

(i) ಜಲ ಸಂರಕ್ಷಣೆ ಮತ್ತು ನೀರಿನ ಕೊಯ್ಲು

(ii) ಬರಗಾಲ ತಡೆಗಟ್ಟುವಿಕೆ ( ಅರಣ್ಯೀಕರಣ ಮತ್ತು ಗಿಡ ನೆಡುವುದೂ ಸೇರಿದಂತೆ)

(iii) ಕಿರು ಮತ್ತು ಸಣ್ಣ ನೀರಾವರಿ ಕಾಮಗಾರಿಗಳು ಸೇರಿದಂತೆ, ನೀರಾವರಿ ಕಾಲುವೆಗಳು

(iv) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ಕುಟುಂಬಗಳ ಒಡೆತನದ, ಭೂ ಸುಧಾರಣಾ ಫಲಾನುಭವಿಗಳ, ಭಾರತ ಸರ್ಕಾರದ ಇಂದಿರಾ ಆವಾಸ್ ಯೋಜನೆ ಫಲಾನುಭವಿಗಳ ಜಮೀನಿನಲ್ಲಿ; ನೀರಾವರಿ ಸೌಲಭ್ಯವನ್ನು ಒದಗಿಸುವುದು.

(v) ಸಾಂಪದಾಯಿಕ ನೀರು ಸಂಚಯಗಳ ಜೀರ್ಣೋದ್ಧಾರ ಸೇರಿದಂತೆ ಕೆರೆಗಳ ಹೂಳು ತೆಗೆಯುವುದು.

(vi) ಜಮೀನಿನ ಅಭಿವೃದ್ಧಿ

(vii) ನೀರು ನಿಂತ ಪ್ರದೇಶಗಳಲ್ಲಿ ಚರಂಡಿಯೂ ಸೇರಿದಂತೆ, ಪ್ರವಾಹ ನಿಯಂತ್ರಣ ಮತ್ತು ಸಂರಕ್ಷಣಾ ಕಾಮಗಾರಿಗಳು

(viii) ಎಲ್ಲಾ ರೀತಿಯ ಹವಾಮಾನ ಪರಿಸ್ಥಿತಿಯಲ್ಲಿ ಉಪಯೋಗಿಸಬಹುದಾದ ಗ್ರಾಮೀಣ ಸಂಪರ್ಕಗಳ ನಿರ್ಮಾಣ

(x) ರಾಜ್ಯ ಸರ್ಕಾರದೊಂದಿಗೆ ಸಮಾಲೋಚಿಸಿ, ಕೇಂದ್ರ ಸರ್ಕಾರ ಅಧಿಸೂಚಿಸುವ ಇತರೆ ಯಾವುದೇ ಕಾಮಗಾರಿ

ಗಿಡ ನೆಡುವ ಕಾಮಗಾರಿಗಳಿಗೆ ಹೆಚ್ಚಿನ ಮೊತ್ತವನ್ನು ವಿನಿಯೋಗಿಸುವ ದೃಷ್ಟಿಯಿಂದ ಪತಿ ಗಾಮ ಪಂಚಾಯತಿಯಲ್ಲಿ ಒಂದು ಆರ್ಥಿಕ ವರ್ಷದಲ್ಲಿ ತೆಗೆದುಕೊಳ್ಳುವ ಎಲ್ಲಾ ಕಾಮಗಾರಿಗಳಿಗೆ ವಿನಿಯೋಗಿಸುವ ಮೊತ್ತದ ಕನಿಷ್ಟ ಶೇಕಡ 20 ರಷ್ಟನ್ನಾದರೂ ಒಂದು ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಗಿಡ ನೆಡುವ ಕಾರ್ಯಕಮಕ್ಕಾಗಿ ವಿನಿಯೋಗಿಸತಕ್ಕದ್ದು.
ರಸ್ತೆಗಳನ್ನು ಕೊನೆಯ ಆದ್ಯತೆಯಾಗಿ ಒಟ್ಟು ಮೊತ್ತದ ಶೇಕಡ 10ಕ್ಕಿಂತ ಕಡಿಮೆ ಮೊತ್ತದಲ್ಲಿ ತೆಗೆದುಕೊಳ್ಳತಕ್ಕದ್ದು.

13. **ಕಾಮಗಾರಿಗಳ ಪಟ್ಟಿ ತಯಾರಿಕೆ**

(1) ಜಿಲ್ಲಾಪಂಚಾಯತಿಯ ಅನುಮೋದನೆಯನ್ನು ಒಳಗೊಂಡಂತೆ, ಮುಂದಿನ ವರ್ಷಕ್ಕಾಗಿ ಅಗತ್ಯವಿರುವ ಎಲ್ಲಾ ಯೋಜನಾ ಪಕಿಯೆಗಳು, ಹಿಂದಿನ ವರ್ಷದ ಡಿಸೆಂಬರ್ ಕೊನೆಯ ವೇಳೆಗೆ ಮುಕ್ತಾಯಗೊಂಡಿರಬೇಕು. ಮುಂದಿನ ವರ್ಷಕ್ಕೆ ನಿರೀಕ್ಷಿಸಲಾಗುವ ಅಕುಶಲ ಉದ್ಯೋಗ ಬೇಡಿಕೆಯ ಆಧಾರದ ಮೇಲೆ "ಕೂಲಿ ಆಯವ್ಯಯ" (Labour Budget) ವನ್ನು ಜಿಲ್ಲಾಕಾರ್ಯಕ್ರಮ ಸಮನ್ವಯ ಅಧಿಕಾರಿ ಸಿದ್ಧಪಡಿಸಬೇಕು. ಇದು ಯೋಜನೆಗಳನ್ನು ರೂಪಿಸಲು ಆಧಾರವಾಗಿರಬೇಕು.

(2) ಮುಂದಿನ ವರ್ಷದ ಉದ್ಯೋಗ ಬೇಡಿಕೆಗೆ ತಕ್ಕಂತೆ ಬೇಕಾಗುವ ಒಟ್ಟು ಕಾಮಗಾರಿಗಳ ಮೌಲ್ಯವನ್ನು ಲೆಕ್ಕಹಾಕಿ,
ಗ್ರಾಮಪಂಚಾಯತಿ, ತಾಲ್ಲೂಕುಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳು ಯಾವ ಮೊತ್ತಕ್ಕೆ ಕಾಮಗಾರಿಗಳನ್ನು
ಗುರುತಿಸಬೇಕು ಎಂಬುದನ್ನು ಅವುಗಳಿಗೆ ಸೂಚಿಸಬೇಕು.

(3) ಪಂಚಾಯತ್ ರಾಜ್ ಸಂಸ್ಥೆಗಳಾದ ಗ್ರಾಮಪಂಚಾಯತಿ, ತಾಲ್ಲೂಕುಪಂಚಾಯತಿ ಮತ್ತು ಜಿಲ್ಲಾಪಂಚಾಯತಿಗಳು, ತಮ್ಮ ಪಾಲಿನ ಒಟ್ಟು ಕಾಮಗಾರಿಗಳ ವೆಚ್ಚದಲ್ಲಿ, ಅಕುಶಲ ಕೂಲಿಗಾಗಿ ಮತ್ತು ಸಾಮಗ್ರಿಗಾಗಿ 60:40 ಅನುಪಾತವನ್ನು ಪಾಲನೆ ಮಾಡಬೇಕು. ಸಾಮಗ್ರಿ ಭಾಗವು, ಸಾಮಗ್ರಿಗಳ ಖರೀದಿ, ಕುಶಲ ಮತ್ತು ಅರೆ ಕುಶಲ ಕಾರ್ಮಿಕರ ಕೂಲಿಯನ್ನು ಸಹ ಒಳಗೊಂಡಿರುತ್ತದೆ.

(4) ತಮಗೆ ನಿಗದಿಪಡಿಸಿರುವ ಮೊತ್ತದಲ್ಲಿ, ಆದ್ಯತೆಯ ಮೇರೆಗೆ ಕಾಮಗಾರಿಗಳನ್ನು ಗುರುತಿಸಲು ಗ್ರಾಮಪಂಚಾಯತಿಗಳು ವಾರ್ಡ್‌ಸಭೆ ಮತ್ತು ಗ್ರಾಮಸಭೆಗಳನ್ನು ಕರೆಯತಕ್ಕದ್ದು.

(5) ಈ ರೀತಿ ಗ್ರಾಮಪಂಚಾಯತಿ ಅನುಮೋದನೆ ನೀಡಿದ ಕಾಮಗಾರಿಗಳ ಆಧ್ಯತಾ ಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು.

(6) ಈ ರೀತಿ ಅನುಮೋದಿಸಿ ಸಿದ್ದಿಪಡಿಸಿದ ಕಾಮಗಾರಿಗಳ ಪಟ್ಟಿಯೊಂದಿಗೆ, ಇವುಗಳ ಪೈಕಿ ತಾನು ಅನುಷ್ಠಾನಗೊಳಿಸುವ ಕಾಮಗಾರಿಗಳನ್ನು ಗುರುತಿಸಿ, ಗ್ರಾಮಪಂಚಾಯತಿಯು, ಕಾರ್ಯಕ್ರಮ ಅಧಿಕಾರಿಗೆ ಸಲ್ಲಿಸಬೇಕು.

(7) ಪಟ್ಟಿಯಲ್ಲಿನ ಕಾಮಗಾರಿಗಳಿಂದ ನಿರೀಕ್ಷಿಸಲಾದ ಅಕುಶಲ ಕೂಲಿಯನ್ನು ಒದಗಿಸಲು ಸಾಕಾಗುವುದಿಲ್ಲವೆಂದು ಕಂಡುಬಂದಲ್ಲಿ, ಹೆಚ್ಚುವರಿ ಪ್ರಸ್ತಾವನೆಗಳನ್ನು ಕಳುಹಿಸಿಕೊಡುವಂತೆ ಕಾರ್ಯಕ್ರಮ ಅಧಿಕಾರಿ, ಆ ಗ್ರಾಮಪಂಚಾಯತಿ ಗೆ ಸೂಚಿಸಬಹುದು.

(8) ಈ ಹಿಂದಿನ ಅನುಭವ, ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಉದ್ಯೋಗಕ್ಕಾಗಿ ನೋಂದಣಿ ಮಾಡಿರುವವರ ಸಂಖ್ಯೆಯನ್ನು ಆಧರಿಸಿ, ಗ್ರಾಮಪಂಚಾಯತಿಯು ಸಲ್ಲಿಸಿರುವ ಕಾಮಗಾರಿಗಳು ಸಾಕಷ್ಟು ಸಂಖ್ಯೆಯಲ್ಲಿರುವ ಹಾಗೂ ತಾಂತ್ರಿಕವಾಗಿ ಸರಿಯಿರುವ ಬಗ್ಗೆ, ಕಾರ್ಯಕ್ರಮ ಅಧಿಕಾರಿಯು ಪರಿಶೀಲಿಸಬೇಕು.

(9) ಈ ಮೇಲಿನಂತೆ ಗ್ರಾಮಪಂಚಾಯತಿಗಳ ಯೋಜನೆಯ ಪಟ್ಟಿಯನ್ನು ಪರಿಶೀಲಿಸಿ ಕ್ರೋಡೀಕರಿಸಿ ತನ್ನ ಷರಾದೊಂದಿಗೆ, ತಾಲ್ಲೂಕುಪಂಚಾಯತಿಗೆ ಕಾರ್ಯಕ್ರಮ ಅಧಿಕಾರಿ ಪ್ರಸ್ತಾವನೆ ಸಲ್ಲಿಸಬೇಕು.

(10) ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ತಾಲ್ಲೂಕುಪಂಚಾಯತಿಗೆ ಸೂಚಿಸಿರುವ ಮೊತ್ತಕ್ಕೆ ಅನುಗುಣವಾಗಿ, ತಾಲ್ಲೂಕುಪಂಚಾಯತಿ ತನಗೆ ಸಂಬಂಧಿಸಿದ ಕಾಮಗಾರಿಗಳನ್ನು ಪ್ರಸ್ತಾಪಿಸಿ, ಆದ್ಯತಾ ಪಟ್ಟಿಯನ್ನು ಸಿದ್ಧಪಡಿಸಬೇಕು. ಗ್ರಾಮಪಂಚಾಯತಿಗಳ ಯೋಜನೆಗಳ ಮತ್ತು ತಾಲ್ಲೂಕುಪಂಚಾಯತಿಯ ಪ್ರಸ್ತಾಪಿತ ಯೋಜನೆಗಳನ್ನು ಒಳಗೊಂಡ ಕ್ರೋಡಿಕೃತ ಪಟ್ಟಿಯನ್ನು ಕಾರ್ಯಕ್ರಮ ಅಧಿಕಾರಿ ತಾಲ್ಲೂಕುಪಂಚಾಯತಿಯ ಅನುಮೋದನೆಗೆ ಮಂಡಿಸಬೇಕು.
ಗ್ರಾ,ಮ ಪಂಚಾಯತಿಗಳು ಸೂಚಿಸಿದ ಆದ್ಯತೆಯನ್ನು ತಾಲ್ಲೂಕುಪಂಚಾಯತಿಯು ಮುಂದುವರೆಸತಕ್ಕದ್ದು. ಎಲ್ಲಾ ರೀತಿಯಲ್ಲಿ ಸರಿ ಇದ್ದ ಪ್ರಸ್ತಾವನೆಗಳನ್ನು ತಾಲ್ಲೂಕುಪಂಚಾಯತಿಯು ತಿರಸ್ಕರಿತಕ್ಕದ್ದಲ್ಲ. ನಿಗದಿತ ಮಾನದಂಡಗಳಿಗೆ ಅನುಸಾರವಾಗಿಲ್ಲದ ಪ್ರಸ್ತಾವನೆಗಳನ್ನು ಗ್ರಾಮಪಂಚಾಯತಿಗೆ ಹಿಂದಿರುಗಿಸಿ ಸೂಕ್ತವಾದ ಪ್ರಸ್ತಾವನೆಗಳನ್ನು ಸಲ್ಲಿಸಲು ತಿಳಿಸತಕ್ಕದ್ದು. ಸರಿ ಇರುವ ಹಾಗೂ ಅನುಮೋದನೆಯಾದ ಪ್ರಸ್ತಾವನೆಗಳನ್ನು, ಕಾರ್ಯಕ್ರಮ ಅಧಿಕಾರಿ, ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗೆ ಸಲ್ಲಿಸತಕ್ಕದ್ದು.

(11) ತಾಲ್ಲೂಕು ಪಂಚಾಯತಿಗಳಿಂದ ಪಡೆದ ಯೋಜನೆಗಳು ತಾಂತ್ರಿಕವಾಗಿ ಹಾಗೂ ಇತರೆ ರೀತಿಗಳಲ್ಲಿ ಸಮರ್ಪಕವಾಗಿರುವ ಬಗ್ಗೆ, ಅಗತ್ಯಕೆ ತಕ್ಕಂತೆ ಸಾಕಷ್ಟು ಇರುವ ಬಗ್ಗೆ, ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಪರಿಶೀಲಿಸಬೇಕು. ಅವರು, ಇತರೆ ಅನುಷ್ಠಾನ ಏಜೆನ್ಸಿಗಳಾದ; ಸಂಪರ್ಕ ಇಲಾಖೆಗಳು, ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ; ಸ್ಥಳೀಯ ಸಂಸ್ಥೆಗಳು ಅಥವಾ ಸರ್ಕಾರಿ ಸ್ವಾಯತ್ತ ಸಂಸ್ಥೆಗಳು, ಸರ್ಕಾರೇತರ ಸಂಸ್ಥೆಗಳು, ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರ ಹೆಚ್ಚಿನ ಷೇರು ಬಂಡವಾಳ ಹೊಂದಿರುವ ಸಹಕಾರ ಸಂಘಗಳು ಮತ್ತು ಸ್ವಸಹಾಯ ಸಂಘಗಳು; ಯೋಜನೆಯಡಿ ತೆಗೆದುಕೊಳ್ಳಲು ಉದ್ದೇಶಿಸಿರುವ ಕಾಮಗಾರಿಗಳನ್ನು, ಅವುಗಳಿಂದ ಆಹ್ವಾನಿಸಬಹುದು. ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಯು ಈ ರೀತಿ ಪಡೆದು, ಪರಿಶೀಲಿಸಿದ ಎಲ್ಲ ಪ್ರಸ್ತಾವನೆಗಳನ್ನು ಜಿಲ್ಲಾಪಂಚಾಯತಿಗೆ ಸಲ್ಲಿಸಬೇಕು. ಜಿಲ್ಲಾಪಂಚಾಯತಿಯು ತನ್ನ ಪಾಲಿನ ಮೊತ್ತಕ್ಕೆ ಕಾಮಗಾರಿಗಳ ಯೋಜನೆಯ ಪ್ರಸ್ತಾವನೆ ಸಿದ್ಧಪಡಿಸಬೇಕು. ತಾಲ್ಲೂಕುಪಂಚಾಯತಿಗಳು ಅಥವಾ ಗ್ರಾಮಪಂಚಾಯತಿಗಳು ಸಲ್ಲಿಸಿದ
ಕಾಮಗಾರಿಗಳ ಪಟ್ಟಿಯ ಆಧ್ಯತೆಯನ್ನು ಜಿಲ್ಲಾಪಂಚಾಯತಿ ಬದಲಾಯಿಸತಕ್ಕದ್ದಲ್ಲ. ಜಿಲ್ಲಾಪಂಚಾಯತಿ ಹೀಗೆ ಪರಿಗಣಿಸಿ ಅನುಮೋದಿಸಿದ ಜಿಲ್ಲಾ ಯೋಜನೆಯ, ಎಲ್ಲ ಕಾಮಗಾರಿಗಳಿಗೆ ಜಿಲ್ಲಾಕಾರ್ಯಕ್ರಮ ಸಮನ್ವಯಾಧಿಕಾರಿ ಆಡಳಿತಾತ್ಮಕ ಮಂಜೂರಾತಿ ನೀಡಬೇಕು.

(12) ಆಡಳಿತಾತ್ಮಕ ಅನುಮೋದನೆ ನೀಡಿದ, ಪತಿ ಕಾಮಗಾರಿಗೆ ಪ್ರತ್ಯೇಕವಾದ ಸಂಖ್ಯೆಯನ್ನು ಕೊಡಬೇಕು.

(13) ಈ ರೀತಿ ಆಡಳಿತಾತ್ಮಕವಾಗಿ ಅನುಮೋದಿಸಲ್ಪಟ್ಟ ಕಾಮಗಾರಿಗಳ ಪಟ್ಟಿಯನ್ನು ಸಂಬಂಧಿಸಿದ ಕಾರ್ಯಕ್ರಮ ಅಧಿಕಾರಿಗೆ ಕಳುಹಿಸಬೇಕು. ಕಾರ್ಯಕ್ರಮ ಅಧಿಕಾರಿಯು ಸಂಬಂಧಪಟ್ಟ ಕಾರ್ಯನಿರ್ವಹಣಾ ಏಜೆನ್ಸಿಗಳಿಗೆ ಇವುಗಳನ್ನು ತಾಂತ್ರಿಕ ಮಂಜೂರಾತಿಗಾಗಿ ಕಳುಹಿಸಿಕೊಡಬೇಕು. ತಾಂತ್ರಿಕವಾಗಿ ಅನುಮೋದಿಸಲ್ಪಟ್ಟ ಕಾಮಗಾರಿಗಳನ್ನು ಕಾರ್ಯಕ್ರಮ ಅಧಿಕಾರಿಯು ಪಡೆದು ಇವುಗಳನ್ನು ಯೋಜನೆಗಳ ಪಟ್ಟಿ (shelf of projects) ಯಾಗಿ ನಿರ್ವಹಿಸಬೇಕು.

14. **ನಿಗಧಿತ ಗ್ರಾಮೀಣ ದರಗಳ ಅನುಸೂಚಿ**

ಉದ್ಯೋಗ ಖಾತರಿ ಯೋಜನೆ ಅಡಿಯಲ್ಲಿ ತೆಗೆದುಕೊಳ್ಳುವ ಕಾಮಗಾರಿಗಳಿಗಾಗಿ ಪ್ರತ್ಯೇಕವಾದ ಗ್ರಾಮೀಣ ಮಾದರಿ ಅನುಸೂಚಿತ ದರಗಳ ಪಟ್ಟಿ ಇರತಕ್ಕದ್ದು. ಒಂದು ದಿನದಲ್ಲಿ ಏಳು ಗಂಟೆಗಳ ಕಾಲ ಕೆಲಸನಿರ್ವಹಿಸಿದಲ್ಲಿ, ರಾಜ್ಯ ಸರ್ಕಾರ ಕಾಲಕಾಲಕ್ಕೆ ನಿಗಧಿ ಪಡಿಸುವ ಕನಿಷ್ಠ ಕೂಲಿಯನ್ನು, ಒಬ್ಬ ಕಾರ್ಮಿಕ ಪಡೆಯುವ ರೀತಿಯಲ್ಲಿ ವಿವಿಧ ಕೆಲಸಗಳಿಗೆ ಘಟಕದ ದರಗಳನ್ನು ನಿಗಧಿಪಡಿಸಬೇಕು.

15. **ಅಂದಾಜುಪಟ್ಟಿ ಮತ್ತು ತಾಂತ್ರಿಕ ಮಂಜೂರಾತಿಗಳು**

ಅಂದಾಜುಗಳ ತಯಾರಿಕೆ, ಆಡಳಿತಾತ್ಮಕ ಮತ್ತು ತಾಂತ್ರಿಕ ಮಂಜೂರಾತಿಗಳು, ಕೆಲಸದ ಅಳತೆ, ಇತ್ಯಾದಿಗಳು, ಗ್ರಾಮಪಂಚಾಯತಿ, ತಾಲ್ಲೂಕುಪಂಚಾಯತಿ, ಜಿಲ್ಲಾಪಂಚಾಯತಿಗೆ ಸಂಬಂಧಿಸಿದಂತೆ ರಚಿಸಲಾಗಿರುವ ಕರ್ನಾಟಕ ಪಂಚಾಯತ್ ರಾಜ್ (ಆಯವ್ಯಯ ಮತ್ತು ಲೆಕ್ಕಗಳ ನಿಯಮಗಳು), ಪ್ರಕಾರ ಇರತಕ್ಕದ್ದು.

**16. ಕಾಮಗಾರಿಗಳ ಅನುಷ್ಠಾನ**

(1) ಕಾಮಗಾರಿಗಳ ಒಟ್ಟು ಮೊತ್ತದ ಕನಿಷ್ಠ ಶೇಕಡ 50ರಷ್ಟು ಕಾಮಗಾರಿಗಳನ್ನು, ಅನುಷ್ಠಾನಕ್ಕಾಗಿ ಗ್ರಾಮಪಂಚಾಯತಿಗಳಿಗೆ ವಹಿಸತಕ್ಕದ್ದು. ಉದ್ಯೋಗ ಬೇಡಿಕೆಗೆ ಅನುಸಾರವಾಗಿ ಕಾಮಗಾರಿಗಳನ್ನು ಪ್ರಾರಂಭಿಸಲು, ಕಾಮಗಾರಿ ಪ್ರಾರಂಭ ಪತ್ರ ನೀಡುವಂತೆ, ಗ್ರಾಮಪಂಚಾಯತಿ ಕಾರ್ಯದರ್ಶಿ, ಕಾರ್ಯಕ್ರಮ ಅಧಿಕಾರಿಗೆ ಕೋರಿಕೆ ಸಲ್ಲಿಸಬೇಕು. ಜಿಲ್ಲಾಕಾರ್ಯಕ್ರಮ ಸಮನ್ವಯಅಧಿಕಾರಿ, ಆಡಳಿತಾತ್ಮಕ ಅನುಮೋದನೆ ನೀಡಿರುವ ಪಟ್ಟಿಯಲ್ಲಿರುವ ಅನುಕ್ರಮದಂತೆ, ಕಾಮಗಾರಿಗಳನ್ನು ಪ್ರಾರಂಭಿಸಲು, ಕಾರ್ಯಕ್ರಮ ಅಧಿಕಾರಿ ಗ್ರಾಮಪಂಚಾಯತಿಗಳಿಗೆ ಕಾಮಗಾರಿ ಪ್ರಾರಂಭ ಪತ್ರ ನೀಡಬೇಕು. ಒಂದು ಆರ್ಥಿಕ ವರ್ಷದಲ್ಲಿ ಕಾಮಗಾರಿಗಳನ್ನು ಪ್ರಾರಂಭಿಸಲು ನೀಡಿದ ಈ ಪತ್ರಗಳ ವಿವರಗಳನ್ನು ಗ್ರಾಮಪಂಚಾಯತಿಯು ಒಂದು ವಹಿಯಲ್ಲಿ ನಿರ್ವಹಿಸತಕ್ಕದ್ದು.

(2) ಕಾಮಗಾರಿ ಪ್ರಾರಂಭ ಪತ್ರ ಪಡೆದಕೂಡಲೆ, ಕಾರ್ಯನಿರ್ವಹಣಾ ಏಜೆನ್ಸಿಗಳು ಕಾಮಗಾರಿಗಳನ್ನು ಪ್ರಾರಂಭಿಸಬೇಕು.

(3) ಉದ್ಯೋಗ ಖಾತರಿ ಯೋಜನೆಯಲ್ಲಿ ಸೂಚಿಸಿರುವ ಕ್ರಮಗಳನ್ನು ಕಾಮಗಾರಿಗಳ ಅನುಷ್ಠಾನದಲ್ಲಿ ಅನುಸರಿಸಬೇಕು.

(4) ಪ್ರತ್ಯೇಕ ಕ್ರಮ ಸಂಖ್ಯೆಯನ್ನು ಹೊಂದಿರುವ ಹಾಜರಿಪಟ್ಟಿಗಳನ್ನು ಜಿಲ್ಲಾಕಾರ್ಯಕ್ರಮ ಸಮನ್ವಯ ಅಧಿಕಾರಿ, ಕಾರ್ಯಕ್ರಮ ಅಧಿಕಾರಿಗೆ ಸರಬರಾಜು ಮಾಡಬೇಕು. ಕಾರ್ಯಕ್ರಮ ಅಧಿಕಾರಿ ಪ್ರತಿ ಕಾರ್ಯನಿರ್ವಹಣಾ ಏಜೆನ್ಸಿಗೆ, ಕಾಮಗಾರಿಗಳ ಅಗತ್ಯಕ್ಕೆ ಅನುಸಾರವಾಗಿ ಈ ಹಾಜರಿ ಪಟ್ಟಿಗಳನ್ನು ವಿತರಿಸಬೇಕು. ಕಾರ್ಯನಿರ್ವಹಣಾ ಇಲಾಖೆಗಳು ಹಾಜರಿಪಟ್ಟಿಗಳ ದಾಸ್ತಾನು ವಹಿಗಳನ್ನು ನಿರ್ವಹಿಸಬೇಕು. ಹಾಜರಿಪಟ್ಟಿಗಳನ್ನು ಪ್ರತಿ ವಾರಕ್ಕೊಮ್ಮೆ ಅಂತಿಮಗೊಳಿಸಬೇಕು.

**17. ಅಕುಶಲ ಕೆಲಸಗಾರರಿಗೆ ಕೂಲಿ ಪಾವತಿ**

(1) ಪುರುಷರಿಗೆ ಮತ್ತು ಮಹಿಳೆಯರಿಗೆ ಸಮಾನ ಕೂಲಿ ಪಾವತಿಸಬೇಕು, ಕೂಲಿಯನ್ನು ಕನಿಷ್ಠ ಹದಿನೈದು ದಿನಗಳಿಗೊಮ್ಮೆಯಾದರೂ ಪಾವತಿಸಬೇಕು. ಜಿಲ್ಲಾವಾರು ಗಳಿಸುವ ಸರಾಸರಿ ಕೂಲಿಯ ವಿವರಗಳನ್ನು ರಾಜ್ಯ ಕಾರ್ಯಕ್ರಮ ಸಮನ್ವಯ ಅಧಿಕಾರಿ ಪ್ರತಿ ವರ್ಷ ರಾಜ್ಯಪರಿಷತ್ತಿನ ಗಮನಕ್ಕೆ ಸಲ್ಲಿಸಬೇಕು. ಕಾರ್ಯನಿರ್ವಹಣಾ ಏಜೆನ್ಸಿ ಯಾವುದೇ ಆದರು ಸಹ, ಅಕುಶಲ ಕಾರ್ಮಿಕರ ಕೂಲಿಯನ್ನು ಗ್ರಾಮಪಂಚಾಯತಿಯ ಮೂಲಕವೇ ಪಾವತಿಸತಕ್ಕದ್ದು.

(2) ಉದ್ಯೋಗ ನೀಡಿದ ದಿನಗಳ ಸಂಖ್ಯೆ ಮತ್ತು ಪಾವತಿಸಿದ ಕೂಲಿಯ ವಿವರಗಳನ್ನು ಕುಟುಂಬ ಉದ್ಯೋಗ ಚೀಟಿಯಲ್ಲಿ ಮತ್ತು ಗ್ರಾಮಪಂಚಾಯತಿ ನಿರ್ವಹಿಸುವ ಉದ್ಯೋಗಾಕಾಂಕ್ಷಿಗಳ ಮತ್ತು ಉದ್ಯೋಗ ವಹಿಯಲ್ಲಿ ಆಗಿಂದಾಗ್ಗೆ ದಾಖಲಿಸುತ್ತಿರಬೇಕು. ಯಾವ ಗ್ರಾಮಗಳಲ್ಲಿ ಬ್ಯಾಂಕ್ ಶಾಖೆ ಅಥವಾ ಅಂಚೆಕಛೇರಿ ಇದೆಯೋ, ಕೂಲಿ ಪಾವತಿಗಾಗಿ ಅವುಗಳಲ್ಲಿ ಖಾತೆಗಳನ್ನು ತೆರೆಯಲು ಕಾರ್ಮಿಕರಿಗೆ ಸಹಾಯ ಮಾಡಬೇಕು.

**18. ಕಾಮಗಾರಿಗಳ ಮುಕ್ತಾಯ ಮತ್ತು ಮಾಹಿತಿಯ ನಿರ್ವಹಣೆ**

ಮುಕ್ತಾಯದ ವರದಿಯೊಂದಿಗೆ ಕಾರ್ಯನಿರ್ವಹಣಾ ಏಜೆನ್ಸಿ ಕಾಮಗಾರಿಯನ್ನು ಅಂತಿಮಗೊಳಿಸಬೇಕು. ಪ್ರತಿ ಗ್ರಾಮಪಂಚಾಯತಿ ಮತ್ತು ಪ್ರತಿ ಕಾರ್ಯನಿರ್ವಹಣಾ ಏಜೆನ್ಸಿ, ಮಂಜೂರಿಯಾದ, ಅನುಷ್ಠಾನಗೊಳಿಸಿದ ಮತ್ತು ಮುಕ್ತಾಯಗೊಂಡ ಕಾಮಗಾರಿಗಳ ವಿವರಗಳನ್ನು ವಹಿಯಲ್ಲಿ ದಾಖಲಿಸಿ ನಿರ್ವಹಿಸಬೇಕು.

**19. ಲೆಕ್ಕಪರಿಶೋಧನೆ**

ಈ ಯೋಜನೆಯಡಿಯ ಲೆಕ್ಕಗಳ ಲೆಕ್ಕಪರಿಶೋಧನೆ ಮಾಡುವುದು ಕಡ್ಡಾಯ. ಜಾರಿಯಲ್ಲಿರುವ ನಿಯಮಗಳ ಪ್ರಕಾರ ಗ್ರಾಮಪಂಚಾಯತಿ, ತಾಲ್ಲೂಕುಪಂಚಾಯತಿ ಮತ್ತು ಜಿಲ್ಲಾಪಂಚಾಯತಿಯ ಲೆಕ್ಕಗಳನ್ನು ಶಾಸನಬದ್ದ ಲೆಕ್ಕಪರಿಶೋಧಕರು, ಲೆಕ್ಕಪರಿಶೋಧನೆ ಮಾಡತಕ್ಕದ್ದು. ರಾಜ್ಯ ಸರ್ಕಾರ ಪಟ್ಟಿಮಾಡಿರುವ ನೋಂದಾಯಿತ ಚಾರ್ಟರ್ಡ ಅಕೌಟೆಂಟ್ಸ್ ಮೂಲಕ ಹಣಕಾಸಿನ ಲೆಕ್ಕಪರಿಶೋಧನೆಯನ್ನು ಮಾಡಲು ಜಿಲ್ಲಾ ಕಾರ್ಯಕ್ರಮ ಸಮನ್ವಯ ಅಧಿಕಾರಿ, ವ್ಯವಸ್ಥೆ ಮಾಡತಕ್ಕದ್ದು.

**20. ಜಾಗೃತಿ ಮತ್ತು ಗುಣನಿಯಂತ್ರಣ**

(1) ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನದ ಮೇಲ್ವಿಚಾರಣೆ ಮಾಡಲು, ಸ್ವತಂತ್ರವಾದ ಜಾಗೃತಿ ಮತ್ತು ಗುಣನಿಯಂತ್ರಣ ತಂಡಗಳನ್ನು ನೇಮಿಸತಕ್ಕದ್ದು.

(2) ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದ ಪ್ರಕರಣ 61(ಎ) ಅಡಿಯಲ್ಲಿ ಪ್ರತಿ ಗ್ರಾಮಕ್ಕೆ ರಚಿಸಲಾಗಿರುವ ಗ್ರಾಮ ನೀರು ಮತ್ತು ನೈರ್ಮಲ್ಯ ಸಮಿತಿ ಈ ಯೋಜನೆಯಡಿಯಲ್ಲಿ ಜಾಗೃತಿ ಮತ್ತು ಉಸ್ತುವಾರಿ ಸಮಿತಿಯಾಗಿಯೂ ಸಹ ಕಾರ್ಯನಿರ್ವಹಿಸತಕ್ಕದ್ದು.

**21. ಸಾಮಾಜಿಕ ಲೆಕ್ಕಪರಿಶೋಧನೆ ಮತ್ತು ಮಾಹಿತಿ ಹಕ್ಕು**

(1) ಉದ್ಯೋಗ ಖಾತರಿ ಯೋಜನೆಯಡಿ ಮಾಡಲಾಗುವ ಯೋಜನೆ, ಅನುಷ್ಠಾನ ಮತ್ತು ಮೌಲ್ಯಮಾಪನಗಳಲ್ಲಿ, ಜನರ ಬಾಗವಹಿಸುವಿಕೆ, ಪಾರದರ್ಶಕತೆ ಮತ್ತು ಜವಾಬ್ದಾರಿಯಿಂದ ಕೂಡಿರುವಂತೆ ಮಾಡಲು ಸಾಮಾಜಿಕ ಲೆಕ್ಕಪರಿಶೋದನೆಯ ವ್ಯವಸ್ಥೆ ಮಾಡತಕ್ಕದ್ದು. ಈ ಯೋಜನೆಯಲ್ಲಿ ಕೆಲಸಮಾಡುವ ಕಾರ್ಮಿಕರಿಗೆ ನ್ಯಾಯಯುತವಾಗಿ ದೊರೆಯಬೇಕಾಗಿರುವ ಹಕ್ಕುಗಳು ಅವರಿಗೆ ದೊರೆಯುತ್ತಿರುವುದನ್ನು ಖಚಿತಪಡಿಸಿಕೊಳ್ಳಲು, ಸಾಮಾಜಿಕ ತಪಾಸಣೆಯನ್ನು, ಪೂರ್ವಾನ್ವಯವಾಗುವಂತೆ ಮಾಡದೆ, ಚಾಲ್ತಿಯಲ್ಲಿರುವ ಪ್ರಕ್ರಿಯೆಗಳಲ್ಲಿ ಮಾಡತಕ್ಕದ್ದು. ಇದನ್ನು; ಅನುಷ್ಠಾನಕ್ಕೆ ಮೊದಲು, ಅನುಷ್ಠಾನದ ಸಮಯದಲ್ಲಿ ಮತ್ತು ಅನುಷ್ಠಾನದ ನಂತರ, ಹೀಗೆ ಮೂರು ಹಂತಗಳಲ್ಲಿ ಮಾಡಬೇಕು ಹಾಗೂ ಇದು ಉದ್ಯೋಗ ಖಾತರಿ ಯೋಜನೆಯ ಮುಖ್ಯ ಚಟುವಟಿಕೆಗಳ ಅವಿಭಾಜ್ಯ ಅಂಗವಾಗಿರತಕ್ಕದ್ದು.

